**Government Order No. DDPER 7 ARU 2003, Bangalore, Dated: 30th September, 2003**

Under the circumstances explained in the preamble, Government are pleased to approve the proposal of privatisation/closure of the Mysore, Minerals Limited as part of Phase-II of PE Reforms. MML be included in the Phase-II PE Reforms for being considered for privatisation/closure.

By Order and in the name of the Governor of Karnataka,

**B.K. GOPALA**

Administrative Officer and Ex-officio

Under Secretary to Government,

DDPER.

PR-1316

**ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ**

**ವಿಷಯ:** ಶ್ರೀ ಬಿ.ಎಸ್. ಜಗದೀಶ್, ಸಂಶೋಧನಾಧಿಕಾರಿ, ಇವರಿಗೆ ಕಾಲಬದ್ಧವೇತನ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಅಧಿಸೂಚನೆ ಸಂಖ್ಯೆ: ಲಾ 15 ಎಲ್ಎಂಪಿ 87, ದಿನಾಂಕ: 23.05.90.
2) ಸರ್ಕಾರದ ಅಧಿಸೂಚನೆ ಸಂಖ್ಯೆ: ಲಾ 8 ಎಲ್ಎಂಪಿ 96, ದಿನಾಂಕ: 26.03.1998.
3) ಭಾಷಾಂತರ ನಿರ್ದೇಶಕರ ಪ್ರಸ್ತಾವನೆ ಸಂಖ್ಯೆ: ಭಾನಿ 38 ಆಡಳಿತ: ಕಾಲಮಿ: ವೇಬಡ್ತಿ:2003, ದಿನಾಂಕ:06.09.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಅಧಿಸೂಚನೆಯಲ್ಲಿ ಶ್ರೀ ಬಿ.ಎಸ್. ಜಗದೀಶ್, ಇವರಿಗೆ ಭಾಷಾಂತರಕಾರರ ಹುದ್ದೆಯಿಂದ ಸಂಶೋಧನಾಧಿಕಾರಿ ಹುದ್ದೆಗೆ ದಿನಾಂಕ: 23.05.1990 ರಿಂದ ಬಡ್ತಿ ನೀಡಲಾಗಿದೆ. (2)ರಲ್ಲಿ ಓದಲಾದ ಅಧಿಸೂಚನೆಯಲ್ಲಿ ಶ್ರೀ ಬಿ.ಎಸ್. ಜಗದೀಶ್, ಇವರು ಸಂಶೋಧನಾಧಿಕಾರಿ ಹುದ್ದೆಗೆ ಬಡ್ತಿ ಹೊಂದಿದ ದಿನಾಂಕ: 23.05.90ಕ್ಕೆ ಬದಲಾಗಿ ದಿನಾಂಕ: 21.09.2002ರಂದು ನಿಗದಿ ಪಡಿಸಲಾಗಿದೆ. ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಭಾಷಾಂತರ ನಿರ್ದೇಶಕರು ಶ್ರೀ ಬಿ.ಎಸ್. ಜಗದೀಶ್ ಸಂಶೋಧನಾಧಿಕಾರಿ ಇವರು ದಿನಾಂಕ: 20.09.2002ರಂದು ಸದರಿ ಹುದ್ದೆಯಲ್ಲಿ ಹತ್ತು ವರ್ಷಗಳ ಜೇಷ್ಠತೆಗಾಗಿ ಪರಿಗಣಿಸುವ ಸೇವೆಯನ್ನು ಪೂರೈಸಿರುವುದರಿಂದ ಕಾಲಬದ್ಧ ವೇತನ ಬಡ್ತಿಯನ್ನು ನೀಡುವಂತೆ ಶಿಫಾರಸ್ಸು ಮಾಡಿರುತ್ತಾರೆ. ನಿರ್ದೇಶಕರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಗಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಂವ್ಯಶಾಇ 50 ಭಾನಿವಿ 2003, ಬೆಂಗಳೂರು, ದಿನಾಂಕ: 1ನೇ ಅಕ್ಟೋಬರ್, 2003**

ಶ್ರೀ ಬಿ.ಎಸ್. ಜಗದೀಶ್, ಸಂಶೋಧನಾಧಿಕಾರಿ, ಇವರಿಗೆ ಕರ್ನಾಟಕ ಸಿವಿಲ್ ಸೇವಾ (ಕಾಲಬದ್ಧ ವೇತನ ಬಡ್ತಿ) ನಿಯಮಗಳು, 1983ರ 3ನೇ ನಿಯಮದನ್ವಯ ದಿನಾಂಕ: 21.09.2002ರಿಂದ ಅನ್ವಯವಾಗುವಂತೆ ರೂ.6000-11200 ವೇತನ ಶ್ರೇಣಿಯಿಂದ ರೂ. 6300-11840 ವೇತನ ಶ್ರೇಣಿಗೆ ಕಾಲಬದ್ಧ ವೇತನ ಬಡ್ತಿಯನ್ನು ಮಂಜೂರು ಮಾಡಲಾಗಿದೆ.

ಸದರಿ ನಿಯಮಗಳ 4ನೇ ನಿಯಮದನ್ವಯ ಇವರ ವೇತನವನ್ನು ನಿಗದಿಪಡಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ರಿಚಾರ್ಡ್ ಲೋಬೊ**

ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ

ಸರ್ಕಾರದ ಅಧೀನ ಕಾರ್ಯದರ್ಶಿ,

ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 1317

**ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ**

**ವಿಷಯ:** ಶ್ರೀ ಜಿ. ಲಿಂಗಪ್ಪ, ನಿಧನ ಹೊಂದಿದ ನಿವೃತ್ತ ಪರಿಷತ್ ಕಾರ್ಯದರ್ಶಿ, ಅಭಿವೃದ್ಧಿ ಇಲಾಖೆ ಇವರ ವಿರುದ್ಧದ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 97 ಎಸ್ಇಎನ್ 97, ದಿನಾಂಕ:03.09.98.

**ಪ್ರಸ್ತಾವನೆ:**

ಬೆಂಗಳೂರು (ಗ್ರಾ) ಜಿಲ್ಲೆಯ ದೊಡ್ಡಬಳ್ಳಾಪುರ ತಾಲ್ಲೂಕಿನ ಕ್ಷೇತ್ರಾಭಿವೃದ್ಧಿ ಅಧಿಕಾರಿಯಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಕಪ್ಪು ಹಲಗೆ ಯೋಜನೆ ಅನ್ವಯ ಶಾಲಾ ಕಟ್ಟಡಗಳ ನಿರ್ಮಾಣದಲ್ಲಿ ಅನೇಕ ಲೋಪದೋಷಗಳನ್ನು ಎಸಗಿ ಶಾಲಾ ಕಟ್ಟಡಗಳು ಪೂರ್ಣವಾಗದೆಯೇ ಹೆಚ್ಚು ಹಣ ಸಂದಾಯ ಮಾಡಿ ತೀವ್ರತರ ಸರ್ಕಾರಿ ಹಣ ದುರುಪಯೋಗವಾಗುವುದಕ್ಕೆ ಹಾಗೂ ಯೋಜನೆಯ ಉದ್ದೇಶಗಳನ್ನು ಸಮರ್ಪಕವಾಗಿ ಸಾಧಿಸಲು ವಿಫಲವಾದ ಆರೋಪಕ್ಕಾಗಿ ಇತರರೊಡನೆ ಶ್ರೀ ಜಿ. ಲಿಂಗಪ್ಪ, ನಿವೃತ್ತ ಪರಿಷತ್ ಕಾರ್ಯದರ್ಶಿ ಅವರ ವಿರುದ್ಧವೂ ಸಹ ಮೇಲೆ ಓದಲಾದ ದಿನಾಂಕ: 03.09.98ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ, ಜಿಲ್ಲಾ ಪಂಚಾಯತ್, ಬೆಂಗಳೂರು (ನಗರ) ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆಯು ಬಾಕಿ ಇದ್ದಾಗ ಶ್ರೀ ಜಿ. ಲಿಂಗಪ್ಪ ರವರು ದಿನಾಂಕ: 16.04.2002ರಂದು ನಿಧನ ಹೊಂದಿರುತ್ತಾರೆ. ಪ್ರಯುಕ್ತ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 97 ಎಸ್‌ಇಎನ್ 97, ಬೆಂಗಳೂರು, ದಿನಾಂಕ:13ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಸನ್ನಿವೇಶದಲ್ಲಿ ಸರ್ಕಾರವು ಶ್ರೀ ಜಿ. ಲಿಂಗಪ್ಪ, ನಿಧನ ಹೊಂದಿದ ನಿವೃತ್ತ ಪರಿಷತ್ ಕಾರ್ಯದರ್ಶಿ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಮುಕ್ತಾಯಗೊಳಿಸುತ್ತದೆ.

ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೌಲಭ್ಯಗಳನ್ನು ಪಡೆಯುತ್ತಿದ್ದರೋ ಅವುಗಳನ್ನು ಪಡೆಯಲು ಅರ್ಹರಿರುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್‌ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1318 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಕಂದಾಯ ಸಚಿವಾಲಯ

**ವಿಷಯ:** 2003ರ ಹಿಂಗಾರು ಹಂಗಾಮಿನಲ್ಲಿ ಕೃಷಿ ಪರಿಕರಗಳ ವಿತರಣೆ ಬಗ್ಗೆ.
ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಅನುದಾನ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಸಂಖ್ಯೆ: ಸಿ.ಡಿ. 107 ಸಿ.ಎಲ್.ಎಸ್. 2003 ದಿನಾಂಕ: 03.09.2003.
2) ಅನಧಿಕೃತ ಟಿಪ್ಪಣಿ ಸಂಖ್ಯೆ: ಕೃ.ತೋ.ಇ. 506 ಕೃ.ಉ.ಇ. 2003 ದಿನಾಂಕ: 04.09.2003.

**ಪ್ರಸ್ತಾವನೆ:**

ರಾಜ್ಯದಲ್ಲಿ ಸತತ ಮೂರು ವರ್ಷಗಳಿಂದ ಬರಪರಿಸ್ಥಿತಿ ಇರುವ ಹಿನ್ನೆಲೆಯಲ್ಲಿ ರೈತಾಪಿ ವರ್ಗಕ್ಕೆ ಹಾಗೂ ಸಂಸ್ಥೆಗಳಿಗೆ ತ್ವರಿತ ಪರಿಹಾರವನ್ನು ನೀಡಲು ಪರಿಹಾರ ಸೂತ್ರವನ್ನು ಮೇಲೆ (1)ರಲ್ಲಿ ಓದಲಾದ ಆದೇಶದಲ್ಲಿ ಪ್ರಕಟಿಸಲಾಗಿದೆ.

ಬರಗಾಲದ ಬವಣೆಯಿಂದ ನೊಂದಿರುವ ರೈತಾಪಿ ವರ್ಗಕ್ಕೆ ನೆರವನ್ನು ಒದಗಿಸುವ ಕುರಿತು ದಿನಾಂಕ: 28.08.2003ರಂದು ನಡೆದ ರಾಜ್ಯದ ಮಂತ್ರಿ ಪರಿಷತ್ ಸಭೆಯಲ್ಲಿ ತೆಗೆದುಕೊಂಡ ನಿರ್ಣಯದ ಹಿನ್ನೆಲೆಯಲ್ಲಿ ಈ ಕೆಳಕಂಡ ತೀರ್ಮಾನಗಳನ್ನು ಅನುಷ್ಠಾನಗೊಳಿಸಲು ಅನುದಾನ ಬಿಡುಗಡೆ ಮಾಡುವಂತೆ ಕೃಷಿ ಮತ್ತು ತೋಟಗಾರಿಕೆ ಇಲಾಖೆಯು ಕಂದಾಯ ಇಲಾಖೆಯನ್ನು ಮೇಲೆ (2)ರಲ್ಲಿ ಓದಲಾದ ಟಿಪ್ಪಣಿಯಲ್ಲಿ ಕೋರಿರುತ್ತದೆ.

ಅ. ರಾಜ್ಯದ ಎಲ್ಲಾ ಸಣ್ಣ ಮತ್ತು ಅತೀಸಣ್ಣ ರೈತರಿಗೆ 20.00 ಕೋಟಿ ರೂಪಾಯಿಗಳ ವೆಚ್ಚದಲ್ಲಿ ಶೇಕಡಾ 50ರ ರಿಯಾಯಿತಿ ದರದಲ್ಲಿ ಹಿಂಗಾರಿ ಜೋಳ, ರಾಗಿ, ಕಡಲೆ, ಮುಸುಕಿನ ಜೋಳ ಹಾಗೂ ಸೂರ್ಯಕಾಂತಿ ಬಿತ್ತನೆ ಬೀಜವನ್ನು ವಿತರಿಸಲು.

ಆ) ಶೇಕಡ 50ರ ರಿಯಾಯಿತಿ ದರದಲ್ಲಿ ಒಂದು ಹೆಕ್ಟೇರಿಗೆ ಮಾತ್ರ 250 ಕೆ.ಜಿ. "ಅಗ್ರಿ ಗೋಲ್ಡ್" ಗೊಬ್ಬರವನ್ನು 225.00 ಲಕ್ಷ ರೂಪಾಯಿಗಳ ವೆಚ್ಚದಲ್ಲಿ ವಿತರಿಸಲು.

ಈ ನಿರ್ಣಯದ ಮೇರೆಗೆ ಈ ಕೆಳಕಂಡಂತೆ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆರ್.ಡಿ. 689 ಟಿ.ಎನ್.ಆರ್.2003,ಬೆಂಗಳೂರು, ದಿನಾಂಕ:23ನೇ ಸೆಪ್ಟೆಂಬರ್,2003**

**(RD 72 R&I 2003)**

ಸಚಿವ ಸಂಪುಟದ ನಿರ್ಣಯದ ಹಿನ್ನೆಲೆಯಲ್ಲಿ ಹಾಗೂ ಸರ್ಕಾರಿ ಆದೇಶ ಸಂಖ್ಯೆ: ಸಿ.ಡಿ. 107 ಸಿ.ಎಲ್.ಎಸ್. 2003 ದಿನಾಂಕ: 03.09.2003ರಲ್ಲಿ ಪ್ರಕಟಿಸಿರುವ ಮೇರೆಗೆ ರಾಜ್ಯದ ಎಲ್ಲಾ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ರಿಯಾಯಿತಿ ದರದಲ್ಲಿ ಬಿತ್ತನೆ ಬೀಜ ಮತ್ತು ಅಗ್ರಿ ಗೋಲ್ಡ್ ಗೊಬ್ಬರವನ್ನು 2003ರ ಹಿಂಗಾರು ಹಂಗಾಮಿನಲ್ಲಿ ಶೇ.50 ರಷ್ಟು ರಿಯಾಯಿತಿ ದರದಲ್ಲಿ ಹಿಂಗಾರಿ ಜೋಳ, ರಾಗಿ, ಕಡಲೆ, ಮುಸುಕಿನ ಜೋಳ ಮತ್ತು ಸೂರ್ಯಕಾಂತಿ ಬೀಜಗಳಿಗೆ ವಿತರಿಸಬೇಕಾಗಿದೆ. ಈ ಹಿನ್ನೆಲೆಯಲ್ಲಿ ರಾಜ್ಯದ ಎಲ್ಲಾ ತಾಲ್ಲೂಕುಗಳ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಶೇಕಡ 50ರ ರಿಯಾಯಿತಿ ದರದಲ್ಲಿ ಈ ಐದು ಹಿಂಗಾರು ಬೆಳೆಗಳ ಬಿತ್ತನೆ ಬೀಜಗಳನ್ನು ಅನುಬಂಧ-1ರಲ್ಲಿನ ಮಾರ್ಗಸೂಚಿಗಳನ್ನು ಪಾಲಿಸುವ ಮೂಲಕ ಈ ಕೆಳಕಂಡ ಷರತ್ತಿಗೆ ಒಳಪಟ್ಟು ಪ್ರಥಮ ಕಂತಾಗಿ ರೂ. 10.00 ಕೋಟಿಯನ್ನು ಪ್ರಕೃತಿ ವಿಕೋಪ ಪರಿಹಾರ ನಿಧಿಯಿಂದ ಕೃಷಿ ನಿರ್ದೇಶಕರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಲಾಗಿದೆ.

1) ಈ ಆದೇಶದಲ್ಲಿ ಬಿಡುಗಡೆ ಮಾಡಿರುವ ಅನುದಾನವನ್ನು ಬರಪೀಡಿತ ಪ್ರದೇಶವೆಂದು ಘೋಷಿಸಲಾಗಿರುವ ತಾಲ್ಲೂಕುಗಳಲ್ಲಿ ಮಾತ್ರ ಬಳಸುವ ಬಗ್ಗೆ ಸೀಮಿತಗೊಳಿಸುವುದು. ಇನ್ನುಳಿದ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಅನುದಾನ ಬಿಡುಗಡೆ ಮಾಡುವ ಬಗ್ಗೆ, ಕೃಷಿ ಇಲಾಖೆಯ ಸೂಕ್ತ ವ್ಯವಸ್ಥೆ ಮಾಡುವುದು.

2) ಬೀಜ ಸಂಗ್ರಹಣೆ ಮತ್ತು ಸರಬರಾಜು ಮಾಡುವ ಸಂದರ್ಭದಲ್ಲಿ ಮೊದಲ ಆದ್ಯತೆಯನ್ನು ಪ್ರಮಾಣಿತ ಬೀಜಗಳಿಗೆ ನೀಡತಕ್ಕದ್ದು. ಪ್ರಮಾಣಿತ ಬೀಜ ಲಭ್ಯವಿಲ್ಲದಿದ್ದಲ್ಲಿ ನೀಜಚೀಟಿ ಬೀಜಗಳನ್ನು ಮಾತ್ರ ಸಂಗ್ರಹಿಸಿ ಸರಬರಾಜು ಮಾಡುವುದು.

3) ನೀಜ ಚೀಟಿ ಬೀಜವನ್ನು ಖರೀದಿಸುವ ಪ್ರತಿಯೊಂದು ಪ್ರಸ್ತಾವನೆಗೆ ಸಂಬಂಧಿಸಿದಂತೆ ಕೃಷಿ ಆಯುಕ್ತರು ಪರಿಶೀಲಿಸಿ ಅನುಮೋದನೆ ನೀಡುವುದು.

4) ಬೀಜ ಖರೀದಿ ಮತ್ತು ಸಂಗ್ರಹಣೆ ಸಂದರ್ಭದಲ್ಲಿ ಪಾರದರ್ಶಕ ಅಧಿನಿಯಮದ ಪ್ರಕಾರ ಎಲ್ಲಾ ನಿಬಂಧನೆಗಳನ್ನು ಕಡ್ಡಾಯವಾಗಿ ಪಾಲಿಸುವ ಮೂಲಕ ಟೆಂಡರ್ ಕರೆದು ಕೃಷಿ ಇಲಾಖೆಯು ಖರೀದಿಸತಕ್ಕದ್ದು.

2. ಮೇಲೆ ಬಿಡುಗಡೆ ಮಾಡಿದ ಅನುದಾನವನ್ನು ಕೃಷಿ ನಿರ್ದೇಶಕರಿಗೆ ಡಿ.ಡಿ. ಮೂಲಕ ಕಳುಹಿಸಲಾಗುವುದು.

3. ಈ ರೀತಿ ಕಳುಹಿಸಲಾದ ಅನುದಾನವನ್ನು ಖಜಾನೆಯಲ್ಲಿ ತೆರೆದಿರುವ ಪಿ.ಡಿ. ಖಾತೆಗೆ ಜಮಾ ಮಾಡಿದ ನಂತರ ಸರ್ಕಾರದಿಂದ ಹೊರಡಿಸಲಾಗಿರುವ ಸುತ್ತೋಲೆ/ ಮಾರ್ಗಸೂಚಿಯಲ್ಲಿರುವ ಸೂಚನೆಯಂತೆ ಅನುದಾನವನ್ನು ಬಳಸತಕ್ಕದ್ದು.

4. ಈ ಅನುದಾನವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆಯೋ ಆ ಉದ್ದೇಶಕ್ಕಾಗಿ ಮಾತ್ರ ಬಳಸತಕ್ಕದ್ದು. ಈ ಅನುದಾನದಲ್ಲಿ ಸಾಧಿಸಿದ ಆರ್ಥಿಕ ಮತ್ತು ಭೌತಿಕ ಪ್ರಗತಿಯ ವರದಿಗಳನ್ನು ಹಾಗೂ ಬಳಕೆ ಪ್ರಮಾಣ ಪತ್ರಗಳನ್ನು ಕೃಷಿ ಆಯುಕ್ತರು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.

5. ಈ ಉದ್ದೇಶಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ 2245-02-114-0-00-100 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

6. ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಎಫ್.ಡಿ. 1074: ವೆಚ್ಚ-7/2003, ದಿನಾಂಕ: 16.09.2003ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2).

**ಅನುಬಂಧ-1**

2003ರ ಹಿಂಗಾರು ಹಂಗಾಮಿನಲ್ಲಿ ಪ್ರಕೃತಿ ವಿಕೋಪ ಪರಿಹಾರ ನಿಧಿಯಡಿ ರೈತರಿಗೆ ಸಹಾಯಧನದಲ್ಲಿ ಬಿತ್ತನೆ ಬೀಜ ವಿತರಣೆ ಬಗ್ಗೆ ಮಾರ್ಗಸೂಚಿ.

1) ಈ ಯೋಜನೆಯಡಿ ಹಿಂಗಾರಿ ಜೋಳ, ರಾಗಿ, ಕಡಲೆ, ಮುಸುಕಿನಜೋಳ ಹಾಗೂ ಸೂರ್ಯಕಾಂತಿ, ಬಿತ್ತನೆ ಬೀಜವನ್ನು-2003ರ ಹಿಂಗಾರು ಹಂಗಾಮಿನಲ್ಲಿ (ರಬಿ) ಮಾತ್ರ ವಿತರಿಸಲಾಗುವುದು.

2) ಬಿತ್ತನೆ ಬೀಜಗಳನ್ನು ಕರ್ನಾಟಕ ರಾಜ್ಯ ಬೀಜ ನಿಗಮ, ರಾಷ್ಟ್ರೀಯ ಬೀಜ ನಿಗಮ ಮತ್ತು ಕರ್ನಾಟಕ ಆಗ್ರೋ ಇಂಡಸ್ಟ್ರೀಸ್ ಮುಖಾಂತರ ನೀಜಚೀಟಿ/ ಪ್ರಮಾಣಿತ ಬೀಜಗಳನ್ನು ವಿತರಿಸಲಾಗುವುದು.

3) ಸಹಾಯಧನವು ವಿತರಣೆಗಾಗಿರುವ ಪ್ರಮಾಣಿತ ಬಿತ್ತನೆ ಬೀಜದ/ನೀಜಚೀಟಿ ಬೀಜದ ಬೆಲೆಯ ಪ್ರತಿಶತ 50ಕ್ಕೆ ಮಾತ್ರ ಸೀಮಿತಗೊಳಿಸುವುದು.

4) ಪ್ರಮಾಣಿತ ಬೀಜ/ ನೀಜಚೀಟಿ ಬೀಜದ ವಿತರಣೆಯನ್ನು ರಾಜ್ಯದ ಎಲ್ಲಾ ಸಣ್ಣ ಮತ್ತು ಅತೀ ಸಣ್ಣ ರೈತರಿಗೆ ಸಹಾಯಧನದ ದರದಲ್ಲಿ ವಿತರಿಸುವುದು. ಈ ಆದೇಶದಲ್ಲಿ ಬಿಡುಗಡೆ ಮಾಡಿದ ಅನುದಾನವನ್ನು ಬರಪೀಡಿತ ಪ್ರದೇಶವೆಂದು ಘೋಷಿಸಿರುವ ತಾಲ್ಲೂಕುಗಳಿಗೆ ಮಾತ್ರ ಸೀಮಿತಗೊಳಿಸುವುದು. ಇನ್ನಿತರ ತಾಲ್ಲೂಕುಗಳಿಗೆ ಸಂಬಂಧಿಸಿದಂತೆ ಅನುದಾನ ಬಿಡುಗಡೆ ಮಾಡುವ ಬಗ್ಗೆ ಕೃಷಿ ಇಲಾಖೆಯ ಸೂಕ್ತ ವ್ಯವಸ್ಥೆ ಮಾಡುವುದು.

5) ಈ ಯೋಜನೆಯನ್ನು ಜಿಲ್ಲಾ ಜಂಟಿ ಕೃಷಿ ನಿರ್ದೇಶಕರುಗಳ/ ಮೇಲ್ವಿಚಾರಣೆಯಲ್ಲಿ ಅನುಷ್ಠಾನಗೊಳಿಸುವುದು.

6) ಬೀಜ ವಿತರಣಾ ಸಂಸ್ಥೆಗಳು, ರಿಯಾಯಿತಿ ದರದಲ್ಲಿ ವಿತರಿಸದ ಬೀಜಗಳ ಬಗ್ಗೆ ವಿವರವಾದ ಮಾಹಿತಿಯನ್ನು ಸಂಬಂಧಪಟ್ಟ ಜಂಟಿ ಕೃಷಿ ನಿರ್ದೇಶಕರುಗಳಿಗೆ ಪ್ರತಿ ವಾರಾಂತ್ಯದಲ್ಲಿ ಸಲ್ಲಿಸುವುದು.

7) ಜಿಲ್ಲಾಧಿಕಾರಿಗಳು, ಜಿಲ್ಲಾ ವಾರ್ತಾ ಇಲಾಖೆ ಹಾಗೂ ಜಿಲ್ಲೆಯ ಜಂಟಿ ನಿರ್ದೇಶಕರು ಪ್ರಮಾಣಿತ ಬಿತ್ತನೆ ಬೀಜ ಸಂಸ್ಥೆಗಳು ಈ ಯೋಜನೆ ಬಗ್ಗೆ ವಿವಿಧ ಪ್ರಸಾರ ಮಾಧ್ಯಮಗಳ ಮೂಲಕ ಹೆಚ್ಚಿನ ರೀತಿಯಲ್ಲಿ ಪ್ರಚಾರ ಮಾಡಿಸುವುದು.

8) ರಾಜ್ಯಮಟ್ಟದಲ್ಲಿ ಈ ಯೋಜನೆಯ ಅನುಷ್ಠಾನದ ಬಗ್ಗೆ ಹೆಚ್ಚುವರಿ ಕೃಷಿ ನಿರ್ದೇಶಕರು (ಬೆಳೆ/ಅಭಿವೃದ್ಧಿ ಮತ್ತು ಯೋಜನೆ) ಇವರನ್ನು ಉಸ್ತುವಾರಿ ಅಧಿಕಾರಿಯನ್ನಾಗಿ ನೇಮಿಸಿದ್ದು, ಅವರು ಪ್ರತಿ ವಾರ ಬೀಜ ವಿತರಣಾ ಸಂಸ್ಥೆಗಳಾದ ಕರ್ನಾಟಕ ರಾಜ್ಯ ಬೀಜ ನಿಗಮ, ರಾಷ್ಟ್ರೀಯ ಬೀಜ ನಿಗಮ ಕರ್ನಾಟಕ ಆಗ್ರೋ ಇಂಡಸ್ಟ್ರೀಸ್‌ಗಳ ಸಭೆ ಕರೆದು, ಪ್ರಗತಿ ವಿಮರ್ಶೆ ಮಾಡಿ, ವಿವರಗಳನ್ನು ಎಲ್ಲಾ ಸಂಬಂಧಪಟ್ಟ ಇಲಾಖೆಗಳಿಗೆ ಸಲ್ಲಿಸುವುದು.

9) ಜಿಲ್ಲಾ ಮಟ್ಟದಲ್ಲಿ ಈ ಯೋಜನೆ ಅನುಷ್ಠಾನದಲ್ಲಿ ಯಾವುದೇ ತೊಂದರೆಗಳಿದ್ದಲ್ಲಿ, ಜಿಲ್ಲಾ ಜಂಟಿ ಕೃಷಿ ನಿರ್ದೇಶಕರು ಸೂಕ್ತ ಕ್ರಮ ಕೈಗೊಳ್ಳುವುದು.

10) ಜಿಲ್ಲಾ ಜಂಟಿ ಕೃಷಿ ನಿರ್ದೇಶಕರುಗಳು ಹಾಗೂ ಬೀಜ ವಿತರಣಾ ಸಂಸ್ಥೆಗಳು ಈ ಯೋಜನೆಯಡಿಯಲ್ಲಿ ವಿತರಿಸಲಾಗಿರುವ ಬೀಜ ಪ್ರಮಾಣ, ರೈತರ ಸಂಖ್ಯೆ, ಪ್ರಸ್ತಾಪಿಸಿದ ರಿಯಾಯಿತಿ ಮೊಬಲಗು, ಸಂಸ್ಥೆಗಳಿಗೆ ಪಾವತಿಯಾಗಿರುವ ಮತ್ತು ಬಾಕಿ ಉಳಿದಿರುವ ಅನುದಾನದ ವಿವರಗಳನ್ನು ಪ್ರತಿ ಪಾಕ್ಷಿಕಕ್ಕೆ ಕೃಷಿ ಆಯುಕ್ತರಿಗೆ ಸಲ್ಲಿಸುವುದು.

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1319 ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2).

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಓ. ಕಿಶನ್‌ಚಂದ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ವಿ.ವಿ. ಫುಣೇದ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರುಗಳ ವಿರುದ್ಧ ಇಲಾಖಾ ವಿಚಾರಣೆ-ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ನೋಟೀಸ್ ಕ್ರಮಾಂಕ: ಸಿಆಸುಇ 131 ಎಸ್‌ಇಎನ್ 2002, ದಿನಾಂಕ: 03.04.2003.

2) ಶ್ರೀ ಓ. ಕಿಶನ್‌ಚಂದ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಹಾಗೂ ಶ್ರೀ ವಿ.ವಿ. ಫುಣೇದ್, ಕೆ.ಎ.ಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರುಗಳು ನೋಟೀಸಿಗೆ ಸಲ್ಲಿಸಿದ ದಿನಾಂಕ: 31.05.2003ರ ಉತ್ತರ.

**ಪ್ರಸ್ತಾವನೆ:**

ಕರ್ನಾಟಕ ರಾಜ್ಯ ಸಂಯಮ ಮಂಡಳಿಯಲ್ಲಿ ಶ್ರೀ ಓ. ಕಿಶನ್‌ಚಂದ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರು ದಿನಾಂಕ: 10.11.1992 ರಿಂದ 10.05.1995ರ ವರೆಗೆ ಹಾಗೂ ಶ್ರೀ ವಿ.ವಿ. ಫುಣೇದ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರು ದಿನಾಂಕ: 22.05.1995 ರಿಂದ 23.08.1995ರ ವರೆಗೆ ಮಂಡಳಿಯ ಕಾರ್ಯದರ್ಶಿ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀ ಓ. ಕಿಶನ್‌ಚಂದ್ ಅವರು 5 ಜನ ಅಭ್ಯರ್ಥಿಗಳನ್ನು ಹಾಗೂ ಶ್ರೀ ವಿ.ವಿ. ಫುಣೇದ್‌ರವರು 3 ಜನ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳನ್ನು ಉಲ್ಲಂಘಿಸಿ ನೇಮಕ ಮಾಡಿದ ಆರೋಪಕ್ಕಾಗಿ ಅವರುಗಳ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಮೇಲೆ (1)ರಲ್ಲಿ ಓದಲಾದ ದಿನಾಂಕ:03.04.2003ರ ನೋಟೀಸ್ ನೀಡಿ ಸಮಜಾಯಿಷಿ ಕೇಳುವುದರ ಮೂಲಕ ಅವರುಗಳ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸ್‌ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 31.05.2003ರ ಉತ್ತರ ಸಲ್ಲಿಸಿದ ಆರೋಪಿತರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆರೋಪಿತ ಅಧಿಕಾರಿಗಳ ಉತ್ತರವನ್ನು ಪರಿಶೀಲಿಸಿದ ಸರ್ಕಾರವು ಅದು ಮನಗಾಣಿಸುವ ರೀತಿಯಲ್ಲಿ ಇಲ್ಲದಿರುವುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ಆರೋಪಿತರುಗಳ ಮೇಲಿನ ವಿಚಾರಣೆಯನ್ನು ಮುಂದುವರೆಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 131 ಎಸ್‌ಇಎನ್ 2002, ಬೆಂಗಳೂರು, ದಿನಾಂಕ:8ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ, ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಓ. ಕಿಶನ್‌ಚಂದ್ ಹಾಗೂ ಶ್ರೀ ವಿ.ವಿ. ಫುಣೇದ್, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿಗಳ ವಿರುದ್ಧ ಮೇಲೆ ಹೇಳಿದ ಆರೋಪ ಕುರಿತು ವಿಚಾರಣೆ ನಡೆಸಲು ಶ್ರೀ ವಿ. ಪದ್ಮನಾಭ ಕೇದಿಲಾಯ ನಿವೃತ್ತ ನ್ಯಾಯಾಧೀಶರು, ಬೆಂಗಳೂರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರಿಗೆ 5,000-00 ರೂಪಾಯಿಗಳ ಗೌರವಧನ ನೀಡಲಾಗುವುದು. ಹಾಗೂ ಸರ್ಕಾರಿ ಆದೇಶ ಕ್ರಮಾಂಕ:ಸಿಆಸುಇ 10 ಸೇಇವಿ 2001, ದಿನಾಂಕ:04.03.2002ರಲ್ಲಿ ನಿಗದಿಪಡಿಸಿರುವಂತೆ ವಾಹನಭತ್ಯೆ ಪಡೆಯುತ್ತಾರೆ. ವಿಚಾರಣೆಯನ್ನು 3 ತಿಂಗಳ ಒಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಅಧೀನ ಕಾರ್ಯದರ್ಶಿ, ವಾರ್ತಾ ಪ್ರವಾಸೋದ್ಯಮ ಹಾಗೂ ಯುವಜನ ಸೇವಾ ಇಲಾಖೆ ಬೆಂಗಳೂರು ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಕಾರ್ಯದರ್ಶಿ ಕರ್ನಾಟಕ ರಾಜ್ಯ ಮದ್ಯಪಾನ ಸಂಯಮ ಮಂಡಳಿ, ಬೆಂಗಳೂರು ಅವರು ಕ್ರಮ ಕೈಗೊಳ್ಳುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್‌ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1320 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ENERGY SECRETARIAT

**Sub:** Appointment of Finance Directors to Electricity Supply Companies (Escoms).

**Read:** 1. Government Order No. DE 33 PSR 2003, Dated: 6th June 2003.

2. Government Order No. DE 33 PSR 2003, Dated: 29th September, 2003.

**Preamble:**

In the Government Order Dated: 06.06.2003 read at (1) above a Selection Committee was constituted for Selection of Director Finance to each of the Escoms. In the Government Order Dated: 29th September, 2003 read at (2) above, the Committee was reconstituted comprising of Special Secretary to Government (Power Reforms), Energy Department as Chairman, Managing Directors of Escoms as Members and Company Secretary, BESCOM as Convener.

The Special Secretary to Government (Power Reforms), Energy Department is on leave and will be returning from leave on 25th October, 2003.

It has now been decided to reconstitute the Selection Committee. Hence the following Order.

**Government Order No.DE 33 PSR 2003, Bangalore, Dated:14th October, 2003**

Under the Circumstances explained in the Preamble, Government are pleased to accord approval for the following:

a) To reconstitute the Selection Committee for selection fo Finance Directors to the Escoms with the following Members viz:

| | | |
|---|---|---|
| i) | Managing Director, KPTCL | Chairman |
| ii) | Managing Director of Escoms | Members |
| iii) | Company Secretary, BESCOM | Convener. |

b) Committee to finalize the selection process based on interview or any other mode as deemed fit by it on or before 7th November 2003.

By Order and in the name of the Governor of Karnataka,

**K.L. JAYARAM**

Under Secretary to Government,

Energy Department.

PR-1321

**ಆರ್ಥಿಕ ಸಚಿವಾಲಯ**

**ವಿಷಯ:** 2003-2004ನೇ ಸಾಲಿಗಾಗಿ ಮಿತವ್ಯಯ ಕ್ರಮಗಳು.

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ: ಆಇ 3 ಬಿಇಎಂ 2001 ದಿನಾಂಕ: 17.10.2001.

**ಪ್ರಸ್ತಾವನೆ:**

ಮೇಲೆ ಉಲ್ಲೇಖಿಸಲಾದ ಆದೇಶದಲ್ಲಿ ಯೋಜನೆಗೆ ಹೆಚ್ಚು ಹಣವನ್ನು ಒದಗಿಸುವ ಸಲುವಾಗಿ ಸಂಪನ್ಮೂಲಗಳನ್ನು ಕ್ರೂಢೀಕರಿಸಲು ಮತ್ತು ಯೋಜನೇತರ ವೆಚ್ಚದಲ್ಲಿ ಮಿತವ್ಯಯವನ್ನು ಸಾಧಿಸಲು ಒಂದು ಸಮಗ್ರ ಮಿತವ್ಯಯ ಆದೇಶವನ್ನು ಹೊರಡಿಸಲಾಯಿತು.

ಕರ್ನಾಟಕದಲ್ಲಿ ಸತತ ಮೂರು ವರ್ಷಗಳ ಕಾಲ ಸಂಭವಿಸಿದ ಬರಗಾಲವು ಹಿಂದೆಂದೂ ಇದ್ದಿಲ್ಲದಂತಹ ತೀವ್ರತರವಾದ ಯಾತನೆ ಮತ್ತು ಕಷ್ಟವನ್ನು ರೈತರಿಗೆ ಉಂಟು ಮಾಡಿದೆ. ರಾಜ್ಯ ಸರ್ಕಾರವು ಉದ್ಯೋಗ ಒದಗಿಸುವ, ಕುಡಿಯುವ ನೀರು ಮತ್ತು ದನಕರುಗಳಿಗೆ ಮೇವಿನ ಪೂರೈಕೆ ಮಾಡುವ ಬೃಹತ್ ಪರಿಹಾರ ಕ್ರಮಗಳನ್ನು ಕೈಗೊಂಡಿದೆ. ಆದಾಗ್ಯೂ ಕೃಷಿ ಅರ್ಥವ್ಯವಸ್ಥೆಯನ್ನು ಪುನರ್‌ಜೀವನಗೊಳಿಸಲು ಮತ್ತು ಬರಗಾಲ ಪೀಡಿತ ರೈತರು ಮತ್ತು ಸಂಬಂಧಿಸಿದ ಸಂಸ್ಥೆಗಳು ತಮ್ಮ ಚಟುವಟಿಕೆಗಳನ್ನು ಪುನಃ ಪ್ರಾರಂಭಿಸಲು ತುರ್ತು ಪರಿಹಾರ ಕಾರ್ಯಕ್ರಮದ ಅಗತ್ಯವಿರುತ್ತದೆ.

ರಾಜ್ಯದಲ್ಲಿರುವ ಬರಗಾಲ ಪರಿಸ್ಥಿತಿಯನ್ನು ಮನಗಂಡು ರಾಜ್ಯ ಸರ್ಕಾರವು ರೈತರಿಗೆ ಪರಿಹಾರಗಳನ್ನು ಒದಗಿಸಲು ಉದ್ದೇಶಿಸಿದೆ. ಈ ಪರಿಹಾರದ ಅಂದಾಜನ್ನು ರೂ. 880.00 ಕೋಟಿಗಳೆಂದು ಅಂದಾಜು ಮಾಡಲಾಗಿದ್ದು, ಈ ಉದ್ದೇಶಕ್ಕೆ ಪ್ರಸಕ್ತ ಸಾಲಿನ ಆರ್ಥಿಕ ವರ್ಷದ ಆಯವ್ಯಯದಲ್ಲಿ ಅವಕಾಶವನ್ನು ಮಾಡಿರುವುದಿಲ್ಲ. ಆದಕಾರಣ ಸರ್ಕಾರದ ವೆಚ್ಚವನ್ನು ಕಡಿತಗೊಳಿಸಲು ಕಟ್ಟುನಿಟ್ಟಿನ ಆರ್ಥಿಕ ಮಿತವ್ಯಯ ಕ್ರಮಗಳನ್ನು ಈ ಕೂಡಲೇ ಜಾರಿಗೊಳಿಸುವ ಅವಶ್ಯಕತೆ ಇರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 2 ಬಿಇಎಂ 2003, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2003**

ದಿನಾಂಕ: 17.10.2001ರ ಸರ್ಕಾರದ ಆದೇಶದಲ್ಲಿ ನಿಗದಿಪಡಿಸಲಾದ ಆರ್ಥಿಕ ಮಿತವ್ಯಯ ಕ್ರಮಗಳೊಂದಿಗೆ, ಈ ಕೆಳಕಂಡ ಮಿತವ್ಯಯ ಕ್ರಮಗಳು ತತ್‌ಕ್ಷಣದಿಂದ ಜಾರಿಗೆ ಬರುತ್ತವೆ:

1. ಆಯವ್ಯಯದಲ್ಲಿ ಅವಕಾಶವನ್ನು ಮಾಡಿದ್ದರೂ ಸಹ ಯಾವುದೇ ಇಲಾಖೆಯು ಸಾಮಗ್ರಿ ಮತ್ತು ದಾಸ್ತಾನು ಸಂಗ್ರಹ/ಪೀಠೋಪಕರಣಗಳು ಮತ್ತು ಜೋಡಣೆಗಳು (Fixtures) ಇವುಗಳನ್ನು ಕೊಳ್ಳುವಂತಿಲ್ಲ. ಆದಾಗ್ಯೂ ವಿದೇಶಿ ಅನುದಾನಿತ ಯೋಜನೆಗಳು ಮತ್ತು ಆರೋಗ್ಯ ಸೇವೆಗಳಿಗೆ ಸಂಬಂಧಿಸಿದ ಪ್ರಸ್ತಾವನೆಗಳನ್ನು ಪೂರ್ಣ ಸಮರ್ಥನೆಯೊಂದಿಗೆ ಆರ್ಥಿಕ ಇಲಾಖೆಗೆ ಕಳುಹಿಸಿ ಕೊಡತಕ್ಕದ್ದು.
2. 2003-2004ನೇ ಆರ್ಥಿಕ ವರ್ಷದಲ್ಲಿ ಆಧುನೀಕರಣಕ್ಕಾಗಿ ವಿವರಣಾ ಶೀರ್ಷಿಕೆ-125-ಆಧುನೀಕರಣ ಇದರಡಿ ಆಯವ್ಯಯ ಅವಕಾಶವನ್ನು ಮಾಡಿದ್ದರೂ ಸಹ ಇಲಾಖೆಗಳು ಆಧುನೀಕರಣಕ್ಕಾಗಿ ಯಾವುದೇ ವೆಚ್ಚವನ್ನು ಮಾಡುವಂತಿಲ್ಲ. ಆರ್ಥಿಕ ವರ್ಷದ ಇನ್ನುಳಿದ ಭಾಗದಲ್ಲಿ ವಿವರಣಾ ಶೀರ್ಷಿಕೆ "125-ಆಧುನೀಕರಣ"ವನ್ನು ಸ್ಥಗಿತಗೊಳಿಸುವಂತೆ ಖಜಾನೆ ನಿರ್ದೇಶಕರು, ಜಿಲ್ಲಾ ಖಜಾನೆಗಳಿಗೆ ಸ್ಪಷ್ಟ ನಿರ್ದೇಶನ ನೀಡಬೇಕು. ವಿಶೇಷ ಸಂದರ್ಭಗಳಲ್ಲಿ ಆರ್ಥಿಕ ಇಲಾಖೆಯ ಅನುಮೋದನೆಯನ್ನು ಪಡೆಯತಕ್ಕದ್ದು.
3. ವಿಧಾನ ಮಂಡಲ ಮತ್ತು ಮಂತ್ರಿ ಮಂಡಲವು ಒಳಗೊಂಡಂತೆ ಇಲಾಖೆಗಳ ಎಲ್ಲಾ ಕಾರ್ಯದರ್ಶಿಗಳ ಪ್ರಯಾಣ ವೆಚ್ಚವನ್ನು ಶೇಕಡಾ 20ಕ್ಕೆ ಕಡಿತಗೊಳಿಸುವುದು. ಆದರೆ, ಕಾನೂನು ಮತ್ತು ವ್ಯವಸ್ಥೆ ಜಾರಿಗೊಳಿಸುವ ಮತ್ತು ಬರಗಾಲ ಮೇಲ್ವಿಚಾರಣೆಗೆ ಸಂಬಂಧಿಸಿದಂತೆ ಮಾಡಲಾಗುವ ಪ್ರಯಾಣಕ್ಕೆ ಈ ಕಡಿತ ಅನ್ವಯಿಸುವುದಿಲ್ಲ. ಇಲಾಖೆಗಳು ಈ ನಿರ್ಬಂಧವನ್ನು ಜಾರಿಗೊಳಿಸಲು ಅಧಿಕೃತ ಪ್ರವಾಸಗಳನ್ನು ಕಡಿಮೆ ಮಾಡಲು ಕ್ರಮ ತೆಗೆದುಕೊಳ್ಳುವುದು.
4. ರಾಜ್ಯದ ಹೊರಗೆ ವಿಮಾನಯಾನವನ್ನು ಸಂಪೂರ್ಣವಾಗಿ ನಿಷೇದಿಸಲಾಗಿದೆ. ವಿಶೇಷ ಸಂದರ್ಭಗಳಲ್ಲಿ ಇಲಾಖಾ ಮುಖ್ಯಸ್ಥರು ಮತ್ತು ಸರ್ಕಾರದ ಕಾರ್ಯದರ್ಶಿಗಳು, ಮುಖ್ಯ ಕಾರ್ಯದರ್ಶಿಗಳ ಪೂರ್ವಾನುಮತಿ ಪಡೆದ ನಂತರವೇ ವಿಮಾನಯಾನವನ್ನು ಕೈಗೊಳ್ಳಬಹುದಾಗಿದೆ. ಮಂತ್ರಿ ಮಂಡಲದ ಸದಸ್ಯರುಗಳು ಮುಖ್ಯಮಂತ್ರಿಯವರ ಪೂರ್ವಾನುಮತಿಯನ್ನು ಪಡೆದ ನಂತರವೇ ರಾಜ್ಯದ ಹೊರಗೆ ವಿಮಾನಯಾನವನ್ನು ಮಾಡಬಹುದಾಗಿದೆ.
5. ಮಂತ್ರಿ ಮಂಡಲದ ಸದಸ್ಯರು ಮತ್ತು ಶಾಸಕಾಂಗ ಒಳಗೊಂಡಂತೆ ಹೊಸ ವಾಹನಗಳ ಖರೀದಿಯನ್ನು ಪೂರ್ಣವಾಗಿ ನಿಷೇದಿಸಲಾಗಿದೆ. ಪೆಟ್ರೋಲ್, ತೈಲ ಮತ್ತು ಲೂಬ್ರಿಕೆಂಟ್ಸ್ ಹಾಗೂ ವಾಹನಗಳ ನಿರ್ವಹಣೆ ಮತ್ತು ದುರಸ್ತಿ ಇವುಗಳ ಮೇಲಣ ವೆಚ್ಚವನ್ನು 2003-2004ರ ಸಾಲಿನ ಆಯವ್ಯಯ ಅವಕಾಶದ ಶೇಕಡ 20ಕ್ಕೆ ಕಡಿತಗೊಳಿಸಲಾಗಿದೆ.
6. ಮಂತ್ರಿಮಂಡಲ ಮತ್ತು ಶಾಸಕಾಂಗ ಇವರ ಕಛೇರಿಗಳನ್ನೂ ಒಳಗೊಂಡಂತೆ ಎಲ್ಲಾ ಕಛೇರಿಗಳಲ್ಲಿ ದೂರವಾಣಿ ವೆಚ್ಚ, ಲೇಖನ ಸಾಮಾಗ್ರಿ ವೆಚ್ಚಗಳನ್ನು ಶೇಕಡಾ 20ಕ್ಕೆ ಕಡಿತಗೊಳಿಸಲಾಗಿದೆ.

7. ನೇರ ನೇಮಕಾತಿ ಮೂಲಕ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಹೊಸ ಹುದ್ದೆಗಳ ಸೃಜನೆ ಮತ್ತು ಭರ್ತಿ ಮಾಡುವುದನ್ನು ಪೂರ್ಣವಾಗಿ ನಿಷೇದಿಸಲಾಗಿದೆ. ಆದರೆ, ವಿದೇಶಿ ಅನುದಾನಿತ ಯೋಜನೆಗಳಿಗೆ ಈ ನಿಷೇದ ಅನ್ವಯಿಸುವುದಿಲ್ಲ. ಆದರೆ, ವಿದೇಶಿ ಅನುದಾನಿತ ಯೋಜನೆಗಳಲ್ಲಿ ಹುದ್ದೆಗಳ ಸೃಜನೆ ಮತ್ತು ಭರ್ತಿ ಮಾಡುವ ಪ್ರಸ್ತಾವನೆಗಳಿಗೆ ಆರ್ಥಿಕ ಇಲಾಖೆಯ ಪೂರ್ವ ಸಹಮತಿಯನ್ನು ಪಡೆಯತಕ್ಕದ್ದು.

ಪುನರ್ವಿನಿಯೋಗದ ಮೂಲಕ ವೇತನದಲ್ಲಿನ ಉಳಿತಾಯದಿಂದ ವೇತನೇತರ ವೆಚ್ಚವನ್ನು ಭರಿಸಲು ಅವಕಾಶವಿರುವುದಿಲ್ಲ. ಮುಖ್ಯ ನಿಯಂತ್ರಣಾಧಿಕಾರಿಗಳು, ಆಯವ್ಯಯ ಅಂದಾಜು ತಯಾರಿಕಾ ಅಧಿಕಾರಿಗಳು ಮತ್ತು ಇಲಾಖಾ ಮುಖ್ಯಸ್ಥರುಗಳು ಈ ಮಿತವ್ಯಯ ಕ್ರಮಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಲು ಜವಾಬ್ದಾರರಾಗಿರುತ್ತಾರೆ. ನಿಗದಿಪಡಿಸಲಾದ ಕಡಿತಗಳಿಗಿಂತ ಹೆಚ್ಚುವರಿ ವೆಚ್ಚ ಮಾಡಿದ್ದಲ್ಲಿ ಅದನ್ನು ತೀವ್ರವಾಗಿ ಪರಿಗಣಿಸಲಾಗುವುದು.

ಎಲ್ಲಾ ಖಜಾನೆಗಳಲ್ಲಿ ಆಯವ್ಯಯ ನಿಯಂತ್ರಣವನ್ನು ಜಾರಿಗೊಳಿಸಿರುವುದರಿಂದ, ಜಿಲ್ಲಾ/ ಉಪ ಖಜಾನೆಗಳು ಖಜಾನೆಗಳಲ್ಲಿ ಸಲ್ಲಿಸಲಾದ ಎಲ್ಲಾ ಬಿಲ್ಲುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸತಕ್ಕದ್ದು ಹಾಗೂ ಮಿತವ್ಯಯ ಕ್ರಮಗಳಲ್ಲಿ ಪ್ರಸ್ತಾಪಿಸಲಾದ ಸ್ಥಗಿತ/ ಕಡಿತಗಳನ್ನು ಒಳಗೊಂಡಂತಹ ಕಟ್ಟುನಿಟ್ಟಾದ ಆಯವ್ಯಯ ನಿಯಂತ್ರಣವನ್ನು ಜಾರಿಗೊಳಿಸತಕ್ಕದ್ದು.

ಈ ಎಲ್ಲಾ ಆರ್ಥಿಕ ಮಿತವ್ಯಯ ಕ್ರಮಗಳು ಅವಶ್ಯವಿರುವ ಬದಲಾವಣೆಗಳೊಂದಿಗೆ ಜಿಲ್ಲಾ ಪಂಚಾಯತ್‌ಗಳು, ಅನುದಾನಿತ ಸಂಸ್ಥೆಗಳು, ನಗರ ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ವಲಯ ಉದ್ದಿಮೆಗಳು, ರಾಜ್ಯ ಸ್ವಾಯತ್ತ ಸಂಸ್ಥೆಗಳು ಮತ್ತು ನಿಗಮಗಳಿಗೆ ಅನ್ವಯವಾಗುತ್ತದೆ.

ಪ್ರತಿ ಇಲಾಖೆಯು ಅನುಷ್ಠಾನಗೊಳಿಸಿದ ಮಿತವ್ಯಯ ಕ್ರಮಗಳ ಪರಿಣಾಮದ ಬಗ್ಗೆ ಆರ್ಥಿಕ ಇಲಾಖೆಯು ಆರ್ಥಿಕ ವರ್ಷದ ಅಂತಿಮ ಭಾಗದಲ್ಲಿ ಸುದೀರ್ಘವಾಗಿ ವಿಮರ್ಶಿಸಬೇಕು. ಯಾವುದೇ ಇಲಾಖೆಯು ಈ ಕ್ರಮಗಳನ್ನು ಪಾಲಿಸಿಲ್ಲವೆಂದು ಕಂಡುಬಂದಲ್ಲಿ ಹೆಚ್ಚುವರಿ ಮತ್ತು ವಿಸ್ತರಿಸಲಾದ ಮಿತವ್ಯಯ ಕ್ರಮಗಳನ್ನು 2004-2005ನೇ ಸಾಲಿಗೂ ವಿಧಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಕೆ. ದಾಸ್**

ಅಪರ ಮುಖ್ಯ ಕಾರ್ಯದರ್ಶಿ ಮತ್ತು
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಆರ್ಥಿಕ ಇಲಾಖೆ.

ಪಿ.ಆರ್. 1322

## FINANCE SECRETARIAT

**Sub:** Withdrawal of Sales Tax exemption extended to M/s JAS Toll Road, Co., Ltd., under Karnataka Sales Tax Act, 1957.

**Read:**
1. G.O. No. IDD 1 UIP 97, Dated: 26.09.1997.
2. G.O. No. FD 274 CSL 2002, Dated: 31.03.2003.
3. Notification No. FD 35 CSL 98(1) Dated: 01.03.1998 and 02.09.1999.
4. Notification No. FD 35 CSL 98 (II) Dated: 01.08.1998 and 02.09.1999.
5. G.O. No. FD 303 CSL 99 Dated: 07.01.2000 and 13.07.2000.

**Preamble:**

M/s JAS Toll Road Co., Ltd., have been granted Entry Tax exemption as per Infrastructure Policy, 1997 vide G.O. under reference (1) above, as prevailing at the time of considering the project. On the request of the company and considering the scheme of the project, the Government of Karnataka had taken a decision to extend the Sales Tax concession as provided under the Infrastructure Policy, 1997, though the Sales Tax exemptions have been withdrawn vide Govt. Order at reference (5) above.

However, the Government has reconsidered the decision to extend the Sales Tax incentives to M/s JAS Toll Road Co., Ltd., in the light of the decision taken at the conference of Chief Ministers and Finance Ministers held on 16.11.1999 to discontinue the Sales Tax based incentives and the subsequent decisions reiterating the stand taken on 16.11.1999 and considers it necessary to withdraw the Sales Tax concessions extended vide G.O. at reference (2) above.

Hence the following Governments Order.

**Government Order No.FD 274 CSL 2003, Bangalore, Dated:24th September, 2003**

In order to give effect to the decision taken at the conference of Chief Minister and Finance Ministers held on 16.11.1999 and the Government Orders at reference (5) above, the Government Order No. FD 274 CSL 2002 Dated: 31.03.2003 is deemed to have been cancelled with effect from 31.03.2003.

By Order and in the name of the Governor of Karnataka,

**S. DIVAKAR**

Under Secretary to Government,
Finance Department (C.T.I.)

PR-1323

## ಆರ್ಥಿಕ ಸಚಿವಾಲಯ

**ವಿಷಯ:** ಪಿಂಚಣಿ ಯೋಜನೆಗಳ ಸುಧಾರಣೆ ಬಗ್ಗೆ.

**ಪ್ರಸ್ತಾವನೆ:**

ಸರ್ಕಾರವು ಬರಪರಿಹಾರ ಕಾರ್ಯಗಳಿಗೆ ಹಣ ಒದಗಿಸುವ ಉದ್ದೇಶದೊಂದಿಗೆ ಆಡಳಿತಾತ್ಮಕ ವೆಚ್ಚಗಳನ್ನು ಕಡಿತಗೊಳಿಸಿ ಸಂಪನ್ಮೂಲ ಕ್ರೋಢೀಕರಿಸುವ ಉದ್ದೇಶದಿಂದ ಸರ್ಕಾರವು ಪ್ರಸ್ತುತ ಜಾರಿಯಲ್ಲಿರುವ ಪಿಂಚಣಿ ಯೋಜನೆಗಳ ಸುಧಾರಣೆ ಮಾಡಬೇಕೆಂದು ತೀರ್ಮಾನಿಸಿದ್ದು, ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 6 ಸನಿತಿ 2003, ಬೆಂಗಳೂರು, ದಿನಾಂಕ:30ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ತಿಳಿಸಿದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಪಿಂಚಣಿ ಯೋಜನೆಗಳ ಸುಧಾರಣೆಗೆ ಸಂಬಂಧಿಸಿದಂತೆ ಕೆಳಕಂಡ ಆದೇಶಗಳನ್ನು ಹೊರಡಿಸಿದೆ:

(1) ವಿವಿಧ ನಿವೃತ್ತಿ ಮತ್ತು ಮರಣ ಸೌಲಭ್ಯಗಳು ಮತ್ತು ಕುಟುಂಬ ಪಿಂಚಣಿಗಳನ್ನು ಲೆಕ್ಕ ಹಾಕುವುದಕ್ಕಾಗಿ ಪ್ರಸ್ತುತ ಸರ್ಕಾರಿ ನೌಕರನು ತನ್ನ ನಿವೃತ್ತಿಯ ಅಥವಾ ಮರಣದ ಸಮಯದಲ್ಲಿ ಹೊಂದಿದ್ದ ಹುದ್ದೆಗೆ ಅನ್ವಯವಾಗುತ್ತಿದ್ದ ವೇತನ ಶ್ರೇಣಿಯಲ್ಲಿ ಆ ಸರ್ಕಾರಿ ನೌಕರನು ಪಡೆದಿದ್ದ ಮೂಲ ವೇತನವನ್ನು ಉಪಲಬ್ದಗಳು ಎಂದು ಪರಿಗಣಿಸುವ ಬದಲಿಗೆ ಆತನು ಸೇವೆಯಲ್ಲಿದ್ದ ನಿಕಟ ಪೂರ್ವದ ಪೂರ್ಣ 10 ತಿಂಗಳ ಅವಧಿಯಲ್ಲಿ ಗಳಿಸಲಾದ ಮೂಲ ವೇತನದ ಸರಾಸರಿಯನ್ನು ಮೂಲ ವೇತನ ಎಂದು ಪರಿಗಣಿಸಲು ಆದೇಶಿಸಲಾಗಿದೆ. ಈಗಿರುವಂತೆಯೇ ಉಪಲಬ್ಧಕ್ಕೆ ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚುವರಿಯಾಗಿ ಮಂಜೂರು ಮಾಡಿರುವ ಸ್ಥಗಿತ ವೇತನ ಬಡ್ತಿಗಳು ಯಾವುದಾದರೂ ಇದ್ದಲ್ಲಿ ಮತ್ತು ಕರ್ನಾಟಕ ಸಿವಿಲ್ ಸೇವೆಗಳು (ಪರಿಷ್ಕೃತ ವೇತನ) ನಿಯಮಗಳು 1999ರ ನಿಯಮ 7ರ ಉಪನಿಯಮ (3)ರ ಅಡಿ ವೈಯಕ್ತಿಕ ವೇತನ ನೀಡಲಾಗಿದ್ದಲ್ಲಿ ಅದು ಸಹ ಸೇರತಕ್ಕದ್ದು.

(2) ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 377ರನ್ವಯ ನಿವೃತ್ತಿ ವೇತನವನ್ನು ಮಂಜೂರು ಮಾಡಲು ಸಕ್ಷಮವಾದ ಅಧಿಕಾರಿಯು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ಮೇರೆಗೆ ಮಂಜೂರು ಮಾಡಲಾದ ಅಥವಾ ಮಂಜೂರು ಮಾಡಬಹುದಾದ ಯಾವುದೇ ನಿವೃತ್ತಿ ವೇತನದ 1/3 ಅಂಶಕ್ಕಿಂತ ಹೆಚ್ಚಾಗದಷ್ಟು ಭಾಗವನ್ನು ಒಂದೇ ಮೊತ್ತದಲ್ಲಿ ಸಂದಾಯವಾಗುವ ಪರಿವರ್ತನೆಗೆ ಮಂಜೂರು ನೀಡಲು ಇರುವ ಅವಕಾಶದ ಬದಲಿಗೆ ನಿವೃತ್ತಿ ವೇತನದ 1/5 ಅಂಶಕ್ಕಿಂತ ಹೆಚ್ಚಾಗದಷ್ಟು ಭಾಗವನ್ನು ಒಂದೇ ಮೊತ್ತದಲ್ಲಿ ಸಂದಾಯವಾಗುವ ಪರಿವರ್ತನೆಯನ್ನು ನೀಡಬಹುದೆಂದು ಆದೇಶಿಸಲಾಗಿದೆ. ನಿವೃತ್ತಿ ವೇತನದ ಪರಿವರ್ತನೆಯ ಧ್ವನಿತ ಸೋಡಿ ದರವನ್ನು (implicit discount rate) ಶೇಕಡ 4 ರಿಂದ ಶೇಕಡ 8ರಷ್ಟು ಹೆಚ್ಚಿಸಲಾಗಿದ್ದು ಅದಕ್ಕೆ ಅನುಗುಣವಾಗಿ ಪರಿವರ್ತನಾ ಕೋಷ್ಟಕವನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

(3) ಒಬ್ಬ ಸರ್ಕಾರಿ ನೌಕರನು ತನ್ನ ಸೇವೆಯನ್ನು ನಿಯಂತ್ರಿಸುವ ನಿಬಂಧನೆ ಮತ್ತು ಷರತ್ತುಗಳ ಮೇರೆಗೆ ವಾಡಿಕೆಯಂತೆ ನಿವೃತ್ತಿ ಹೊಂದುವ ವಯಸ್ಸಿನಲ್ಲಿ ನಿವೃತ್ತಿಗೊಳ್ಳುವಲ್ಲಿ, ರಜೆಯನ್ನು ಮಂಜೂರು ಮಾಡುವ ಪ್ರಾಧಿಕಾರವು ಅಂಥ ಸರ್ಕಾರಿ ನೌಕರನ ಲೆಕ್ಕದಲ್ಲಿ ಇರುವ ಗಳಿಕೆ ರಜೆ ಪೈಕಿ ಗ್ರೂಪ್ ಎ ಮತ್ತು ಗ್ರೂಪ್ ಬಿ ವೃಂದದ ಅಧಿಕಾರಿಗಳಿಗೆ ಸಂಬಂಧಪಟ್ಟಂತೆ ಗರಿಷ್ಟ 180 ದಿನಗಳಿಗೆ ಒಳಪಟ್ಟು ಮತ್ತು ಗ್ರೂಪ್ ಸಿ ಮತ್ತು ಡಿ ವೃಂದಗಳ ನೌಕರರಿಗೆ ಸಂಬಂಧಪಟ್ಟಂತೆ ಗರಿಷ್ಟ 210 ದಿನಗಳಿಗೆ ಒಳಪಟ್ಟು ಗಳಿಕೆ ರಜೆಯ ರಜಾ ವೇತನಕ್ಕೆ ಸಮಾನವಾದ ನಗದನ್ನು ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 118-ಎ ಅನ್ವಯ ಮಂಜೂರು ಮಾಡಬಹುದೆಂದು ಆದೇಶಿಸಲಾಗಿದೆ.

(4) ನಿವೃತ್ತಿ ವೇತನ ಪಡೆಯಲು ಕನಿಷ್ಠ ಹತ್ತು ವರ್ಷಗಳ ಅರ್ಹತಾದಾಯಕ ಸೇವೆಯನ್ನು ಸಲ್ಲಿಸಬೇಕೆಂದು ನಿಯಮ 222ರ ಪರಂತುಕದಲ್ಲಿನ ಉಪಬಂಧಗಳನ್ನು ಮಾರ್ಪಡಿಸಿ ಕನಿಷ್ಠ ಹದಿನೈದು ವರ್ಷಗಳ ಅರ್ಹತಾ ಸೇವೆ ಸಲ್ಲಿಸಬೇಕೆಂದು ಆದೇಶಿಸಿದೆ.

2. ಈ ಆದೇಶವು ದಿನಾಂಕ: 1ನೇ ಸೆಪ್ಟೆಂಬರ್ 2003ರಿಂದ ಜಾರಿಗೆ ಬರತಕ್ಕದ್ದು.

3. ಈ ಆದೇಶವು, ಮೇಲ್ಕಂಡ ಸೌಲಭ್ಯಗಳು ಅನ್ವಯವಾಗುವ ಮತ್ತು ಜಾರಿಯಲ್ಲಿರುವ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಎಲ್ಲಾ ಅನುದಾನಿತ ಶಿಕ್ಷಣ ಸಂಸ್ಥೆಗಳ, ಸ್ಥಳೀಯ ಸಂಸ್ಥೆಗಳ, ವಿಶ್ವವಿದ್ಯಾನಿಯಗಳ ಹಾಗೂ ರಾಜ್ಯ ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳ, ರಾಜ್ಯ ಸ್ವಾಯತ್ತ ಸಂಸ್ಥೆಗಳ ಮತ್ತು ನಿಗಮಗಳು ಇತ್ಯಾದಿಗಳ ನೌಕರರಿಗೂ ಸಹ ಅನ್ವಯಿಸುತ್ತದೆ.

4. ಕರ್ನಾಟಕ ಸಿವಿಲ್ ಸೇವಾ ನಿಯಮಾವಳಿಗಳ ಸಂಬಂಧಪಟ್ಟ ನಿಯಮಗಳಿಗೆ ತಿದ್ದುಪಡಿಗಳನ್ನು ಪ್ರತ್ಯೇಕವಾಗಿ ಮಾಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಗೋಪಾಲಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು-1).

ಪಿ.ಆರ್. 1324

**ವಿಷಯ:** ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳಲ್ಲಿನ ನಿಯಮ 118 ಹಾಗೂ ಅನುಬಂಧ-ಸಿ ಅನ್ವಯ ಗಳಿಕೆ ರಜೆ ಅಧ್ಯರ್ಪಿಸಿ ನಗದೀಕರಣ ಪಡೆಯುವ ಸೌಲಭ್ಯವನ್ನು ಸ್ಥಗಿತಗೊಳಿಸುವ ಬಗ್ಗೆ.

**ಓದಲಾಗಿದೆ:** ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 3 ಎಸ್‌ಆರ್‌ಎಸ್ 2002, ದಿನಾಂಕ: 28.12.2002.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶದಲ್ಲಿ 2003-2004ನೇ ಸಾಲಿನ ಎರಡು ವರ್ಷಗಳ ಬ್ಲಾಕ್ ಅವಧಿಗೆ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಸೌಲಭ್ಯವನ್ನು ನಿಗದಿಗೊಳಿಸುವ ಬಗ್ಗೆ ಆದೇಶ ಹೊರಡಿಸಲಾಗಿದೆ.

ಸರ್ಕಾರವು ಬರಪರಿಹಾರ ಕಾರ್ಯಗಳಿಗೆ ಹಣ ಒದಗಿಸುವ ಉದ್ದೇಶದೊಂದಿಗೆ ಆಡಳಿತಾತ್ಮಕ ವೆಚ್ಚವನ್ನು ಕಡಿಮೆಗೊಳಿಸಲು ಆರ್ಥಿಕ ಮಿತವ್ಯಯ ಆದೇಶಗಳನ್ನು ಜಾರಿಗೊಳಿಸಬೇಕೆಂದು ಉದ್ದೇಶಿಸಿ ಹಲವಾರು ತೀರ್ಮಾನಗಳನ್ನು ಕೈಗೊಂಡಿದ್ದು ಅವುಗಳ ಪೈಕಿ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಸೌಲಭ್ಯವನ್ನು ಪಡೆಯುವ ಸೌಲಭ್ಯವನ್ನು ಮುಂದಿನ ಆದೇಶದವರೆಗೆ ಸ್ಥಗಿತಗೊಳಿಸಬೇಕೆಂಬ ತೀರ್ಮಾನವೂ ಸಹ ಸೇರಿದೆ. ಈ ಹಿನ್ನೆಲೆಯಲ್ಲಿ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 5 ಎಸ್‌ಆರ್‌ಎಸ್ 2003, ಬೆಂಗಳೂರು, ದಿನಾಂಕ:30ನೇ ಸೆಪ್ಟೆಂಬರ್, 2003**

ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 3 ಎಸ್‌ಆರ್‌ಎಸ್ 2002 ದಿನಾಂಕ: 28.12.2002ನ್ನು ರದ್ದುಪಡಿಸುತ್ತ, ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ ನಿಯಮ 118 ಮತ್ತು ಅನುಬಂಧ-ಸಿ ಅನ್ವಯ ಗಳಿಕೆ ರಜೆಯನ್ನು ಅಧ್ಯರ್ಪಿಸಿ ನಗದೀಕರಣ ಸೌಲಭ್ಯವನ್ನು ಪಡೆಯಲು ಇರುವ ಸೌಲಭ್ಯವನ್ನು 01.10.2003ರಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಸ್ಥಗಿತಗೊಳಿಸಲಾಗಿದೆ.

2. ಈ ಆದೇಶವು, ಈ ಸೌಲಭ್ಯವನ್ನು ಜಾರಿಗೊಳಿಸಿರುವ ಸರ್ಕಾರದಿಂದ ಸಹಾಯಾನುದಾನ ಪಡೆಯುತ್ತಿರುವ ಎಲ್ಲಾ ಅನುದಾನಿತ ಶಿಕ್ಷಣ ಸಂಸ್ಥೆಗಳ, ಸ್ಥಳೀಯ ಸಂಸ್ಥೆಗಳ, ವಿಶ್ವವಿದ್ಯಾನಿಲಯಗಳ ಹಾಗೂ ರಾಜ್ಯ ಸಾರ್ವಜನಿಕ ಸ್ವಾಮ್ಯದ ಸಂಸ್ಥೆಗಳ, ರಾಜ್ಯ ಸ್ವಾಯತ್ತ ಸಂಸ್ಥೆಗಳ, ಮಂಡಳಿ ಮತ್ತು ನಿಗಮಗಳು ಇತ್ಯಾದಿಗಳ ನೌಕರರಿಗೂ ಸಹ ಅನ್ವಯಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಗೋಪಾಲಕೃಷ್ಣ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು-1).

ಪಿ.ಆರ್. 1325

**ಕಾರ್ಮಿಕ ಸಚಿವಾಲಯ**

**ವಿಷಯ:** ಡಾ: ಗಣೇಶ್ ಎ. ಕಿಣಿ, ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ, ಹುಬ್ಬಳ್ಳಿ, ಇವರ ಅನಧಿಕೃತ ಗೈರು ಹಾಜರಿಯ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಕಾಇ 304 ಎಲ್‌ಎಸ್‌ಐ 97, ದಿನಾಂಕ: 26.07.2000 ಮತ್ತು 27.02.2002.
2) ಡಾ: ಗಣೇಶ್ ಎ. ಕಿಣಿ, ವಿಮಾ ವೈದ್ಯಾಧಿಕಾರಿ ಇವರು ಮಾನ್ಯ ಕರ್ನಾಟಕ ರಾಜ್ಯಪಾಲರಿಗೆ ಸಲ್ಲಿಸಿದ ಮೇಲ್ಮನವಿ ದಿನಾಂಕ: 01.10.2000.
3) ಸರ್ಕಾರಿ ಆದೇಶ ಸಂಖ್ಯೆ: ಎಲ್‌ಡಿ 314 ಎಲ್‌ಎಸ್‌ಐ 2001, ದಿನಾಂಕ: 17.04.2003.
4) ನೋಟೀಸ್ ಸಂಖ್ಯೆ: ಎಲ್‌ಡಿ 314 ಎಲ್‌ಎಸ್‌ಐ 2001, ದಿನಾಂಕ: 17.04.2003.
5) ಡಾ: ಗಣೇಶ್ ಎ. ಕಿಣಿ. ವಿಮಾ ವೈದ್ಯಾಧಿಕಾರಿ, ಇವರ ದಿನಾಂಕ: 21.05.2003ರ ರಕ್ಷಣಾ ಹೇಳಿಕೆ.
6) ಸರ್ಕಾರಿ ಆದೇಶ ಸಂಖ್ಯೆ: ಎಲ್‌ಡಿ 314 ಎಲ್‌ಎಸ್‌ಐ 2001, ದಿನಾಂಕ: 07.07.2003.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 26.07.2000ದ ಸರ್ಕಾರಿ ಆದೇಶದಲ್ಲಿ ಡಾ: ಗಣೇಶ್ ಎ. ಕಿಣಿ, ವಿಮಾ ವೈದ್ಯಾಧಿಕಾರಿ, ಕಾರಾವಿ ಆಸ್ಪತ್ರೆ ಹುಬ್ಬಳ್ಳಿ, ಇವರ ಅನಧಿಕೃತ ಗೈರುಹಾಜರಾತಿಗೆ ಸಂಬಂಧಿಸಿದಂತೆ ನಡೆಸಲಾದ ಇಲಾಖಾ ವಿಚಾರಣೆಯಿಂದ ಸದರಿ ವೈದ್ಯರ ಮೇಲಿನ ಆಪಾದನೆಗಳು ಸಾಬೀತಾದ ಹಿನ್ನೆಲೆಯಲ್ಲಿ ಇವರಿಗೆ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 108ರನ್ವಯ ಹಾಗೂ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8(viii)ರನ್ವಯ ಸೇವೆಯಿಂದ ವಜಾ ಮಾಡುವ ದಂಡನೆಯನ್ನು ವಿಧಿಸಲಾಗಿತ್ತು. ಅನಂತರ ಮೇಲೆ (1)ರಲ್ಲಿ ಓದಲಾದ ದಿನಾಂಕ: 27.02.2002ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 26ರನ್ವಯ ಈ ಪ್ರಕರಣವನ್ನು ಪುನರ್ ಪರಿಶೀಲಿಸಿ ಡಾ: ಗಣೇಶ್ ಎ. ಕಿಣಿ, ವಿಮಾ ವೈದ್ಯಾಧಿಕಾರಿ, ಇವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 26.07.2000ರಲ್ಲಿನ ಆದೇಶದಲ್ಲಿ ವಿಧಿಸಲಾಗಿದ್ದ ದಂಡನೆಯನ್ನು ಮಾರ್ಪಡಿಸಿ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳ ನಿಯಮ 8(vii)ರನ್ವಯ ಸೇವೆಯಿಂದ ತೆಗೆದುಹಾಕುವ ದಂಡನೆಯನ್ನು ವಿಧಿಸಲಾಗಿತ್ತು.

ಡಾ: ಗಣೇಶ್ ಎ. ಕಿಣಿ, ಇವರು ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 18ರಡಿಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಕಾಇ 304 ಎಲ್‌ಎಸ್‌ಐ 97, ದಿನಾಂಕ: 26.07.2000ದಲ್ಲಿ ವಿಧಿಸಲಾಗಿದ್ದ ದಂಡನೆಯನ್ನು ರದ್ದುಪಡಿಸುವಂತೆ ಕೋರಿ ಮೇಲ್ಮನವಿಯನ್ನು ದಿನಾಂಕ: 01.10.2000ರಂದು ಮಾನ್ಯ ಕರ್ನಾಟಕ ರಾಜ್ಯಪಾಲರಿಗೆ ಸಲ್ಲಿಸಿದ್ದರು. ಸದರಿ ವೈದ್ಯಾಧಿಕಾರಿಗಳು ಸಲ್ಲಿಸಿದ ಮೇಲ್ಮನವಿಯನ್ನು ಪರಿಶೀಲಿಸಿದ ಮಾನ್ಯ ರಾಜ್ಯಪಾಲರು ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 28(ಎ) ಮತ್ತು 11(4)ರ ಪ್ರಕಾರ ಶಿಸ್ತು ಪ್ರಾಧಿಕಾರವು ಅರ್ಜಿದಾರರಿಗೆ ದೋಷಾರೋಪಣಾ ಪಟ್ಟಿಯೊಂದಿಗೆ ನೋಟೀಸನ್ನು ಜಾರಿ ಮಾಡದ ಕಾರಣ ನಿಯಮಗಳ ಉಲ್ಲಂಘನೆಯಾಗಿದ್ದು ಇದರಿಂದಾಗಿ ಸ್ವಾಭಾವಿಕವಾಗಿ ಶಿಸ್ತು ಪ್ರಕರಣಗಳು ಅಸಿಂಧುವಾಗುತ್ತದೆಂದು ಅಭಿಪ್ರಾಯ ಪಟ್ಟು ವೈದ್ಯರು ಸಲ್ಲಿಸಿದ್ದ ಮೇಲ್ಮನವಿಯನ್ನು ಪರಿಗಣಿಸಿ ಲೋಪವಾಗಿರುವ ಹಂತದಿಂದ ವಿಚಾರಣೆಯನ್ನು ಪ್ರಾರಂಭಿಸುವಂತೆ ಸೂಚಿಸಿ ಪ್ರಕರಣವನ್ನು ಹಿಂದಿರುಗಿಸಿದ್ದರು. ಆದ್ದರಿಂದ ಮೇಲೆ (3)ರಲ್ಲಿ ಓದಲಾದ ಆದೇಶದಲ್ಲಿ ಡಾ: ಗಣೇಶ್ ಎ. ಕಿಣಿ, ವಿಮಾ ವೈದ್ಯಾಧಿಕಾರಿ ಇವರನ್ನು ಸೇವೆಯಿಂದ ತೆಗೆದುಹಾಕಿ ಹೊರಡಿಸಲಾಗಿದ್ದ ಆದೇಶವನ್ನು ಮಾರ್ಪಡಿಸಿ ಅವರ ಅನಧಿಕೃತ ಗೈರುಹಾಜರಿಯ ಬಗ್ಗೆ ಹೊಸದಾಗಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲು ಆದೇಶಿಸಲಾಗಿದೆ. ಅಲ್ಲದೆ ಕರ್ನಾಟಕ ನಾಗರೀಕ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 10(4)ರ ಪ್ರಕಾರ ಇವರನ್ನು ಸೇವೆಯಿಂದ ತೆಗೆದುಹಾಕಲಾದ ದಿನಾಂಕದಿಂದ ಮುಂದಿನ ಆದೇಶದವರೆಗೆ ಇವರು ಅಮಾನತ್ತಿನಲ್ಲಿದ್ದಾರೆಂದು ಭಾವಿಸಲಾಗಿದೆ ಎಂದು ಸಹಾ ಆದೇಶಿಸಲಾಗಿದೆ. ಅದರಂತೆ ಡಾ: ಗಣೇಶ್ ಎ. ಕಿಣಿ,

ಇವರ ಅನಧಿಕೃತ ಗೈರುಹಾಜರಾತಿಗೆ ಸಂಬಂಧಿಸಿದಂತೆ ದೋಷಾರೋಪಣೆ ಪಟ್ಟಿಯನ್ನು ರೂಪಿಸಿ ಈ ಬಗ್ಗೆ ತಮ್ಮ ರಕ್ಷಣಾ ಹೇಳಿಕೆ ಏನಾದರೂ ಇದ್ದಲ್ಲಿ ಸಲ್ಲಿಸುವಂತೆ ಸದರಿ ವೈದ್ಯರಿಗೆ ಮೇಲೆ (4)ರಲ್ಲಿ ಓದಲಾದ ನೋಟೀಸಿನಲ್ಲಿ ಸೂಚಿಸಲಾಗಿತ್ತು.

ಡಾ: ಗಣೇಶ್ ಎ. ಕಿಣಿ, ಇವರು ಮೇಲೆ (5)ರಲ್ಲಿ ಓದಲಾದ ತಮ್ಮ ರಕ್ಷಣಾ ಹೇಳಿಕೆಯಲ್ಲಿ ತಮ್ಮ ವಿರುದ್ಧ ಮಾಡಲಾದ ಆರೋಪಗಳನ್ನು ನಿರಾಕರಿಸಿರುತ್ತಾರೆ ಹಾಗೂ ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(4)ನ್ನು ಸರ್ಕಾರಿ ಅಧಿಸೂಚನೆ ಸಂಖ್ಯೆ: DPAR 4 SDE 2000, ದಿನಾಂಕ: 15.04.2002ರಲ್ಲಿ ತೆಗೆದುಹಾಕಲಾಗಿರುವುದರಿಂದ ತಮ್ಮನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸುವಂತೆ ಕೋರಿರುತ್ತಾರೆ.

ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(4)ನ್ನು ಸರ್ಕಾರಿ ಅಧಿಸೂಚನೆ ಸಂಖ್ಯೆ:DPAR 4 SDE 2000, ದಿನಾಂಕ: 15.04.2002ರಲ್ಲಿ ತೆಗೆದುಹಾಕಲಾಗಿರುವುದರಿಂದ ಡಾ: ಗಣೇಶ್ ಎ. ಕಿಣಿ, ಇವರನ್ನು ಸೇವೆಯಿಂದ ತೆಗೆದುಹಾಕಲಾದ ದಿನಾಂಕದಿಂದ ಮುಂದಿನ ಆದೇಶದವರೆಗೆ ಇವರನ್ನು ಅಮಾನತ್ತಿನಲ್ಲಿದ್ದಾರೆಂದು ಭಾವಿಸತಕ್ಕದ್ದೆಂದು ಹೊರಡಿಸಿರುವ ಆದೇಶವನ್ನು ಮಾರ್ಪಡಿಸುವುದು ಅಗತ್ಯವಾಗಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಾಇ 314 ಎಲ್‌ಎಸ್‌ಐ 2001, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಸನ್ನಿವೇಶದ ಹಿನ್ನೆಲೆಯಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಕಾಇ 314 ಎಲ್‌ಎಸ್‌ಐ 2001, ದಿನಾಂಕ: 17.04.2003ರಲ್ಲಿ ಕರ್ನಾಟಕ ಸಿವಿಲ್ ಸೇವೆಗಳು (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳು 1957ರ ನಿಯಮ 10(4)ರ ಪ್ರಕಾರ ಡಾ: ಗಣೇಶ್ ಎ. ಕಿಣಿ, ಇವರನ್ನು ಸೇವೆಯಿಂದ ತೆಗೆದುಹಾಕಲಾದ ದಿನಾಂಕದಿಂದ ಮುಂದಿನ ಆದೇಶದವರೆಗೆ ಅಮಾನತ್ತಿನಲ್ಲಿದ್ದಾರೆಂದು ಭಾವಿಸತಕ್ಕದ್ದೆಂದು ಹೊರಡಿಸಿರುವ ಆದೇಶವನ್ನು ಹಿಂತೆಗೆದುಕೊಳ್ಳಲಾಗಿದೆ ಹಾಗೂ ತಕ್ಷಣದಿಂದ ಜಾರಿಗೆ ಬರುವಂತೆ ಡಾ: ಗಣೇಶ್ ಎ. ಕಿಣಿ ಇವರನ್ನು ಸೇವೆಗೆ ಪುನರ್‌ಸ್ಥಾಪಿಸಿ ಕಾರಾವಿ ಆಸ್ಪತ್ರೆ, ಮಂಗಳೂರು ಇಲ್ಲಿ ಖಾಲಿ ಇರುವ ವಿಮಾ ವೈದ್ಯಾಧಿಕಾರಿ ಹುದ್ದೆಗೆ ನೇಮಿಸಲಾಗಿದೆ. ಡಾ. ಗಣೇಶ್ ಎ. ಕಿಣಿ, ಇವರನ್ನು ಸೇವೆಯಿಂದ ತೆಗೆದುಹಾಕಲಾದ ದಿನಾಂಕದಿಂದ ಇವರನ್ನು ಸೇವೆಗೆ ಪುನರ್ ಸ್ಥಾಪಿಸಲಾದ ದಿನಾಂಕದವರೆಗಿನ ಅವಧಿಯನ್ನು ಯಾವ ರೀತಿ ಪರಿಗಣಿಸಬೇಕೆಂಬ ಬಗ್ಗೆ ಇವರ ವಿರುದ್ಧ ಪ್ರಾರಂಭಿಸಿರುವ ಇಲಾಖಾ ವಿಚಾರಣೆಯ ವರದಿಯ ಆಧಾರದ ಮೇಲೆ ಅಂತಿಮ ಆದೇಶವನ್ನು ಹೊರಡಿಸಿದ ನಂತರ ನಿರ್ಧರಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್. ವಿಶ್ವನಾಥ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1326 ಕಾರ್ಮಿಕ ಇಲಾಖೆ.

**ಕಂದಾಯ ಸಚಿವಾಲಯ**

**ವಿಷಯ:** ಹಿರಿಯ ಉಪ ನೋಂದಣಾಧಿಕಾರಿ ಹುದ್ದೆಯನ್ನು ಜಿಲ್ಲಾ ನೋಂದಣಿ ಕಛೇರಿ, ಮಂಡ್ಯ ಇಲ್ಲಿಗೆ ಅಧೀಕ್ಷಕರ ಹುದ್ದೆಯನ್ನಾಗಿ ಸ್ಥಳಾಂತರಿಸುವ ಕುರಿತು.

**ಓದಲಾಗಿದೆ:** ಸರ್ಕಾರಿ ಅಧಿಸೂಚನೆ ಸಂಖ್ಯೆ: ಕಂಇ 48 ಮುನೋಸೇ (2) 2003, ದಿನಾಂಕ: 20.09.2003.

**ಪ್ರಸ್ತಾವನೆ:**

ಮಂಡ್ಯ ಜಿಲ್ಲಾ ನೋಂದಣಾಧಿಕಾರಿಗಳ ಕಛೇರಿಯಲ್ಲಿ ಇತ್ತೀಚೆಗೆ ಕಾರ್ಯಭಾರವು ಹೆಚ್ಚಿದ್ದು ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಕಛೇರಿಯಲ್ಲಿಯ ಸಿಬ್ಬಂದಿಯನ್ನು ಹೆಚ್ಚಿಸುವ ದೃಷ್ಟಿಯಿಂದ ಓದಲಾದ ಸರ್ಕಾರಿ ಆದೇಶದಲ್ಲಿ ನೀಡಿದ ಮುಂಬಡ್ತಿಯಿಂದ ಖಾಲಿ ಇರುವ ರಾಜಾಜಿನಗರದ ಉಪ ನೋಂದಣಿ ಕಛೇರಿಯ ಹಿರಿಯ ಉಪ ನೋಂದಣಾಧಿಕಾರಿ ಹುದ್ದೆಯನ್ನು ಜಿಲ್ಲಾ ನೋಂದಣಾಧಿಕಾರಿ ಕಛೇರಿ ಅಧೀಕ್ಷಕರ ಹುದ್ದೆಯನ್ನಾಗಿ ಸ್ಥಳಾಂತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 48 ಮುನೋಸೇ(2) 2003, ಬೆಂಗಳೂರು, ದಿನಾಂಕ: 9ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಉಪ ನೋಂದಣಿ ಕಛೇರಿ, ರಾಜಾಜಿನಗರ, ಬೆಂಗಳೂರು ನಗರ ಜಿಲ್ಲೆ ಇಲ್ಲಿ ಶ್ರೀ ಶಿವರಾಮಯ್ಯ, ಹಿರಿಯ ಉಪ ನೋಂದಣಾಧಿಕಾರಿ ಅವರ ಮುಂಬಡ್ತಿಯಿಂದ ತೆರವಾದ ಹಿರಿಯ ಉಪ ನೋಂದಣಾಧಿಕಾರಿ ಹುದ್ದೆಯನ್ನು ಸಾರ್ವಜನಿಕ ಹಿತದೃಷ್ಟಿಯಿಂದ ಮಂಡ್ಯ ಜಿಲ್ಲೆಯ ಜಿಲ್ಲಾ ನೋಂದಣಾಧಿಕಾರಿ ಕಛೇರಿಯ ಅಧೀಕ್ಷಕರ ಹುದ್ದೆಯನ್ನಾಗಿ ಸ್ಥಳಾಂತರಿಸಿ ಮುಂದಿನ ಆದೇಶದವರೆಗೆ ನೇಮಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶೈಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1327 ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ಕಾನೂನು ಸಚಿವಾಲಯ**

**ವಿಷಯ:** ಶ್ರೀ ಎಂ.ಬಿ. ಯಂಕಂಚಿ, 2ನೇ ಅಧಿಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಸತ್ರ, ನ್ಯಾಯಾಲಯ, ಧಾರವಾಡ, ಇವರ ವಿರುದ್ಧ ಇಲಾಖಾ ವಿಚಾರಣೆ ನಡೆಸಲು ವಿಚಾರಣಾ ಪ್ರಾಧಿಕಾರಿ ಮತ್ತು ಮಂಡನಾಧಿಕಾರಿಯನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಲಾ 397 ಪಿಪಿಇ 01, ಬೆಂಗಳೂರು, ದಿನಾಂಕ: 24.06.2003.

2) ಶ್ರೀ ವಿ.ಎಸ್. ಅರಟ್ಟಿ, ಅಧ್ಯಕ್ಷಾಧಿಕಾರಿ, ಫಾಸ್ಟ್ರಾಕ್ ನ್ಯಾಯಾಲಯ, ಧಾರವಾಡ ಇವರ ಪತ್ರ ದಿನಾಂಕ: 30.08.03.

**ಪ್ರಸ್ತಾವನೆ:**

ಶ್ರೀ ಎಂ.ಬಿ. ಯಂಕಂಚಿ, 2ನೇ ಅಧಿಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಸತ್ರ ನ್ಯಾಯಾಲಯ, ಧಾರವಾಡ ಇವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಶ್ರೀ ವಿ.ಎಸ್. ಅರಟ್ಟಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಧಾರವಾಡ ಇವರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (2)ರಲ್ಲಿ ಶ್ರೀ ವಿ.ಎಸ್. ಅರಟ್ಟಿ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಧಾರವಾಡ ರವರು ಸರ್ಕಾರಕ್ಕೆ ಪತ್ರ ಬರೆದು ಧಾರವಾಡ ಫಾಸ್ಟ್ರಾಕ್ ನ್ಯಾಯಾಲಯದ ಅಧ್ಯಕ್ಷಾಧಿಕಾರಿಯಾಗಿ ದಿನಾಂಕ: 11.08.03ರ ನಂತರವೂ ಮುಂದುವರೆಯಲು ತಾವು ಬಯಸಿರುವುದರಿಂದ ಈ ಪ್ರಕರಣದ ವಿಚಾರಣಾಧಿಕಾರಿಯಾಗಿ ಕಾರ್ಯನಿರ್ವಹಿಸಲು ಸಾಧ್ಯವಾಗುವುದಿಲ್ಲವಾದ್ದರಿಂದ ಬೇರೊಬ್ಬರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸುವಂತೆ ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 397 ಪಿಪಿಇ, 2001, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್, 2003**

1) ಶ್ರೀ ಎಂ.ಬಿ. ಯಂಕಂಚಿ, 2ನೇ ಅಧಿಕ ಸರ್ಕಾರಿ ಅಭಿಯೋಜಕರು, 2ನೇ ಅಧಿಕ ಸತ್ರ ನ್ಯಾಯಾಲಯ, ಧಾರವಾಡ ಇವರ ವಿರುದ್ಧದ ಆಪಾದನೆಗಳ ಬಗ್ಗೆ 1957ರ ಕೆ.ಸಿ.ಎಸ್ (ಸಿಸಿಎ) ನಿಯಮಾವಳಿ 11ನೇ ನಿಯಮದ ಉಪ ನಿಯಮ (2)ರನ್ವಯ ಹಾಗೂ ಸಿಆಸುಇ ಯ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.04.98ರನ್ವಯ ಇಲಾಖಾ ವಿಚಾರಣೆ ನಡೆಸಲು ಸದರಿ ನಿಯಮಗಳ ನಿಯಮ 11 ಮತ್ತು 11 (ಎ)ರನ್ವಯ ಪ್ರತಿ ಪ್ರಕರಣಕ್ಕೆ ರೂ. 5.000-00 (ಐದು ಸಾವಿರ ರೂಗಳು ಮಾತ್ರ)ಗಳ ಸಂಚಿತ ಸಂಭಾವನೆ ಹಾಗೂ ಪ್ರತಿ ಪ್ರಕರಣಕ್ಕೆ ರೂ. 1,000-00 (ಒಂದು ಸಾವಿರ ರೂ.ಗಳು ಮಾತ್ರ) ವಾಹನ ಭತ್ಯೆ ನೀಡುವ ಆಧಾರದ ಮೇಲೆ ಶ್ರೀ ಎಂ.ಎನ್. ಗದಗ್, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಮಹೇಶ ನಿಲಯ, ನಾಯಕ್ ಚೌಲಾ, ಪಿ.ಬಿ. ರೋಡ್, ಧಾರವಾಡ ಇವರನ್ನು ಕೆಳಕಂಡ ಷರತ್ತುಗಳಿಗೆ ಒಳಪಡಿಸಿ ವಿಚಾರಣಾ ಪ್ರಾಧಿಕಾರಿಯನ್ನಾಗಿ ಸರ್ಕಾರ ನೇಮಿಸಿದೆ.

ಈ ಪ್ರಕರಣದಲ್ಲಿ ಸರ್ಕಾರದ ಪರವಾಗಿ ವಿಚಾರಣಾ ಪ್ರಾಧಿಕಾರದ ಮುಂದೆ ಮಂಡಿಸಲು ಮೇಲ್ಕಂಡ ನಿಯಮಗಳ ನಿಯಮ 11(5)(ಸಿ)ರನ್ವಯ ಸರ್ಕಾರಿ ಅಭಿಯೋಜಕರು, ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಧಾರವಾಡ ಇವರನ್ನು ಮಂಡನಾಧಿಕಾರಿಯಾಗಿ ನೇಮಿಸಿದೆ.

**ಷರತ್ತುಗಳು:**

1) ಪ್ರಕರಣದ ವಿಚಾರಣೆಯನ್ನು ಸರ್ಕಾರಿ ಅಭಿಯೋಜಕರು ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ ಧಾರವಾಡ ಇವರ ಕಛೇರಿಯಲ್ಲಿ ನಡೆಸತಕ್ಕದ್ದು.
2) ವಿಚಾರಣಾ ಪ್ರಾಧಿಕಾರಿಯವರಿಗೆ ಇಲಾಖಾ ವಿಚಾರಣೆ ಮುಕ್ತಾಯವಾಗುವವರೆಗೆ ಸರ್ಕಾರಿ ಅಭಿಯೋಜಕರು ಧಾರವಾಡರವರು ತಮ್ಮ ಕಛೇರಿಯಲ್ಲಿ ಲಭ್ಯವಿರುವ ಬೆರಳಚ್ಚುಗಾರರ: ಶೀಘ್ರಲಿಪಿಗಾರರ ಸೇವೆಯನ್ನು ಒದಗಿಸುವ ಜೊತೆಗೆ ಅಗತ್ಯ ಲೇಖನ ಸಾಮಗ್ರಿ ಸಹ ಒದಗಿಸತಕ್ಕದ್ದು.
3) ಇಲಾಖಾ ವಿಚಾರಣೆಯನ್ನು 2 ತಿಂಗಳೊಳಗಾಗಿ ಪೂರೈಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸತಕ್ಕದ್ದು.
4) ಅಭಿಯೋಗ ನಿರ್ದೇಶಕರು, ಬೆಂಗಳೂರು, ರವರು ರೂ. 5.000 (ರೂ. ಐದು ಸಾವಿರ ಮಾತ್ರ) ಸಂಚಿತ ಸಂಭಾವನೆ ಮತ್ತು ರೂ. 1.000 (ರೂ. ಒಂದು ಸಾವಿರ ಮಾತ್ರ) ವಾಹನ ಭತ್ಯೆಯನ್ನು ವಿಚಾರಣಾ ಪ್ರಾಧಿಕಾರಿಯವರಿಗೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ ನಂತರ ಪಾವತಿಸತಕ್ಕದ್ದು.
5) ಈ ಸಂಬಂಧ ತಗಲುವ ವೆಚ್ಚವನ್ನು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ 2003-04ನೇ ಸಾಲಿನ ಆಯವ್ಯಯದಲ್ಲಿ ಕಛೇರಿ ವೇತನದ ಲೆಕ್ಕ ಶೀರ್ಷಿಕೆಯಲ್ಲಿ ಒದಗಿಸಲಾಗಿರುವ ಅನುದಾನದಲ್ಲಿ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶ್ರೀಧರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಪಿ.ಆರ್. 1328 ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀ ಸಿ.ಎಸ್. ಪಾಟೀಲ್, ಸಹಾಯಕ ಅಭಿಯೋಗ ನಿರ್ದೇಶಕರು, ಪೊಲೀಸ್ ಅಧೀಕ್ಷಕರ ಕಛೇರಿ, ಬೆಳಗಾವಿ ಇವರ ವಿರುದ್ಧದ ಆರೋಪಗಳಿಂದ ಅವರನ್ನು ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:**
1) ನಿರ್ದೇಶಕರು ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ, ಬೆಂಗಳೂರು,ರವರ ಪತ್ರ ಸಂಖ್ಯೆ: ಡಿಪಿಎನ್:ಸಿಶಾ-1:145:98-99, ದಿನಾಂಕ: 08.07.99, 07.08.99, 01.10.99, 16.11.99,24.07.2000 ಮತ್ತು 09.11.2000.
2) ಆರೋಪಿತರಿಗೆ ಜಾರಿ ಮಾಡಲಾದ ಕಾರಣ ಕೇಳುವ ತಿಳುವಳಿಕೆ ಪತ್ರ ಸಂಖ್ಯೆ: ಲಾ 109 ಪಿಪಿಇ 99, ದಿನಾಂಕ: 03.02.2000.
3) ಆರೋಪಿತರ ಹೇಳಿಕೆ ದಿನಾಂಕ: 11.02.2000 ಮತ್ತು 04.04.2000.
4) ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 3 ಸೇಇವಿ 96, ದಿನಾಂಕ: 24.04.98.
5) ಸರ್ಕಾರದ ಆದೇಶ ಸಂಖ್ಯೆ: ಲಾ 109 ಪಿಪಿಇ 99, ದಿನಾಂಕ: 29.12.2000.
6) ಶ್ರೀ ಪಿ.ಬಿ. ಚೌಗಲೇ ಜಿಲ್ಲಾ ನಿವೃತ್ತ ನ್ಯಾಯಾಧೀಶರು ಇವರ ವಿಚಾರಣಾ ವರದಿ ದಿನಾಂಕ: 10.07.03.

**ಪ್ರಸ್ತಾವನೆ:**

ಶ್ರೀ ಸಿ.ಎಸ್. ಪಾಟೀಲ್, ಸಹಾಯಕ ಅಭಿಯೋಗ ನಿರ್ದೇಶಕರು, ಎಸ್.ಪಿ. ಕಛೇರಿ ಬೆಳಗಾವಿ, ಇವರು ಬೆಳಗಾವಿ ಜಿಲ್ಲೆಯ ಮೂಡಲಗಿ ಆರಕ್ಷಕಠಾಣೆಯ ಕ್ರೈಂ ಸಂಖ್ಯೆ: 79:94, ಭಾ. ದಂ. ಸಂಖ್ಯೆ: ಕಲಂ 420,406,408,477(ಎ) 427, 468, 120(ಎ)ರಡಿಯಲ್ಲಿ ದಾಖಲಾದ ಪ್ರಕರಣದಲ್ಲಿ ದೋಷಾರೋಪಣಾ ಪಟ್ಟಿ ಪರಿಶೀಲಿಸಿ ಆರೋಪಿ ನಂ.1 ರಿಂದ 3ನೇ ಯವರು ಅಪರಾಧ ಮಾಡಿದ ಬಗ್ಗೆ ಮಾತ್ರ ಸಾಕ್ಷ್ಯಾಧಾರಗಳು ಇರುತ್ತವೆಂದು 4ನೇ ಆರೋಪಿ ಈ ಅಪರಾಧದಲ್ಲಿ ಭಾಗಿಯಾಗಿರುವ ಬಗ್ಗೆ ಸಾಕಷ್ಟು ಸಾಕ್ಷ್ಯಾಧಾರಗಳಿದ್ದರೂ ಯಾವುದೇ ಸಾಕ್ಷ್ಯಾಧಾರ ಇಲ್ಲವೆಂಬ ಅಭಿಪ್ರಾಯ ನೀಡಿ ಕರ್ತವ್ಯ ಲೋಪ ಎಸಗಿ ಕೆಸಿಎಸ್ (ನಡತೆ) ನಿಯಮಾವಳಿ 1966ರ ನಿಯಮ 3(i) (ii) ಮತ್ತು (iii)ನ್ನು ಸ್ಪಷ್ಟವಾಗಿ ಉಲ್ಲಂಘಿಸಿರುವುದರಿಂದ ಇವರ ವಿರುದ್ಧ ಶಿಸ್ತು ಕ್ರಮ ಜರುಗಿಸುವಂತೆ ಮೇಲೆ ಓದಲಾದ ಕ್ರಮಾಂಕ (1)ರಲ್ಲಿ ಅಭಿಯೋಗ ನಿರ್ದೇಶಕರ ಸರ್ಕಾರವನ್ನು ಕೋರಿದ್ದರು.

ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (2)ರ ಕಾರಣ ಕೇಳುವ ತಿಳುವಳಿಕೆ ಪತ್ರದೊಂದಿಗೆ ಅನುಬಂಧ-1 ರಿಂದ 4 ರವರೆಗಿನ ದೋಷಾರೋಪಣಾ ಪಟ್ಟಿಯನ್ನು ಆರೋಪಿತರಾದ ಶ್ರೀ ಸಿ.ಎಸ್. ಪಾಟೀಲರಿಗೆ ಜಾರಿಗೊಳಿಸಿ ತಮ್ಮ ಮೇಲಿನ ಆರೋಪಗಳನ್ನು ಒಪ್ಪಿಕೊಳ್ಳುವ ಅಥವಾ ನಿರಾಕರಿಸುವ ಬಗ್ಗೆ ಸಮಜಾಯಿಷಿ ನೀಡುವಂತೆ ತಿಳಿಯಪಡಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (3)ರ ಲಿಖಿತ ಹೇಳಿಕೆಗಳನ್ನು ಶ್ರೀ ಸಿ.ಎಸ್. ಪಾಟೀಲರು ಸರ್ಕಾರಕ್ಕೆ ಸಲ್ಲಿಸಿದ್ದನ್ನು ಪರಿಶೀಲಿಸಿ ಅವರ ಹೇಳಿಕೆಗಳು ಒಪ್ಪುವಂತಹದ್ದಲ್ಲವಾದ್ದರಿಂದ ಸದರಿ ಅಧಿಕಾರಿಯವರ ಮೇಲಿನ ಆರೋಪಗಳ ಸತ್ಯಸತ್ಯತೆಯನ್ನು ಕಂಡುಕೊಳ್ಳುವ ಹಿತದೃಷ್ಟಿಯಿಂದ ಮೇಲೆ ಓದಲಾದ ಕ್ರಮಾಂಕ (4)ರ ಅನುಸಾರವಾಗಿ ಪ್ರಕರಣದ ಇಲಾಖಾ ವಿಚಾರಣೆಯನ್ನು ನಡೆಸಿ ವಿಚಾರಣಾ ವರದಿ ಸಲ್ಲಿಸುವಂತೆ ಮೇಲೆ ಓದಲಾದ ಕ್ರಮಾಂಕ (5)ರಲ್ಲಿ ಶ್ರೀ ಪಿ.ಬಿ. ಚೌಗಲೆ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಬೆಂಗಳೂರು ರವರನ್ನು ವಿಚಾರಣಾ ಪ್ರಾಧಿಕಾರಿಯನ್ನಾಗಿ ಹಾಗೂ ಶ್ರೀ ಪಿ.ಕೆ. ಮಲಪುರೆ, ಸಹಾಯಕ ಅಭಿಯೋಗ ನಿರ್ದೇಶಕರು, ಬೆಳಗಾವಿ ವಿಭಾಗ, ಬೆಳಗಾವಿ ರವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ ಕ್ರಮಾಂಕ (6)ರಲ್ಲಿ ಶ್ರೀ ಪಿ.ಬಿ. ಚೌಗಲೆ, ನಿವೃತ್ತ ಜಿಲ್ಲಾ ನ್ಯಾಯಾಧೀಶರು ಹಾಗೂ ವಿಚಾರಣಾಧಿಕಾರಿಯವರು ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸುತ್ತಾ, ಈ ಇಲಾಖಾ ವಿಚಾರಣಾ ಪ್ರಕರಣಕ್ಕೆ ಸಂಬಂಧಿಸಿದಂತೆ ವಿಚಾರಣಾ ಸಂದರ್ಭದಲ್ಲಿ ಪ್ರಕರಣದ ಮಂಡನಾಧಿಕಾರಿಯವರು ಸಲ್ಲಿಸಿದ ದಾಖಲೆಗಳು, ಸಾಕ್ಷ್ಯಾಧಾರಗಳನ್ನು ಸಾಕ್ಷ್ಯಾಧಾರರ ಹೇಳಿಕೆಗಳನ್ನು ಹಾಗೂ ವಾದಿ-ಪ್ರತಿವಾದಿಗಳ ವಾದ-ವಿವಾದಗಳನ್ನು ಆರಿಸಿ ಪರಿಶೀಲಿಸಲಾಗಿ ಶ್ರೀ ಸಿ.ಎಸ್. ಪಾಟೀಲ್‌ರವರ ಎಲ್ಲಾ ಆರೋಪಗಳು ಸಾಬೀತಾಗುವುದಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿರುವ ವಿಚಾರಣಾವರದಿಯನ್ನು ಸರ್ಕಾರವು ಕೂಲಂಕುಷವಾಗಿ ಪರಿಶೀಲಿಸಿದ ನಂತರ, ವಿಚಾರಣಾಧಿಕಾರಿಯವರ ವಿಚಾರಣಾ ವರದಿಯನ್ನು ಒಪ್ಪಿಕೊಂಡು ಕೆಳಕಂಡಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 109 ಪಿಪಿಇ 99 (ಭಾ), ಬೆಂಗಳೂರು, ದಿನಾಂಕ:7ನೇ ಅಕ್ಟೋಬರ್, 2003**

ಶ್ರೀ ಸಿ.ಎಸ್. ಪಾಟೀಲ್, ಸಹಾಯಕ ಅಭಿಯೋಗ ನಿರ್ದೇಶಕರು, ಪೊಲೀಸ್ ಅಧೀಕ್ಷಕರ ಕಛೇರಿ, ಬೆಳಗಾವಿ ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣಾಧಿಕಾರಿಯವರು ಸದರಿ ಅಧಿಕಾರಿಯವರ ಮೇಲಿನ ಆರೋಪಗಳು ಸಾಬೀತಾಗುವುದಿಲ್ಲ ಎಂಬ ಅಭಿಪ್ರಾಯ ವ್ಯಕ್ತಪಡಿಸಿ ಸರ್ಕಾರಕ್ಕೆ ಸಲ್ಲಿಸಿರುವ ವಿಚಾರಣಾವರದಿಯನ್ನು ಒಪ್ಪಿಕೊಂಡು, ಸದರಿ ಅಧಿಕಾರಿಯವರನ್ನು ಆರೋಪಗಳಿಂದ ಮುಕ್ತಗೊಳಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶ್ರೀಧರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಪಿ.ಆರ್. 1329 ಕಾನೂನು ಇಲಾಖೆ (ಆಡಳಿತ-2).

**ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ**

**ವಿಷಯ:** ಶ್ರೀ ವಿ. ಶಂಕರ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅವರ ಜಾತಿಯ ಪರಿಶೀಲನೆ-ದಿನಾಂಕ: 23.08.2003ರ ಆದೇಶವನ್ನು ಪರಾಮರ್ಶಿಸುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರಿ ಆದೇಶ ಕ್ರಮಾಂಕ ಸಿಆಸುಇ 23 ಎಸ್‌ಇಎನ್ 2003 ದಿನಾಂಕ: 23.08.2003.

**ಪ್ರಸ್ತಾವನೆ:**

ಶ್ರೀ ವಿ. ಶಂಕರ್, ಕೆ.ಎ.ಎಸ್. (ಹಿರಿಯ ಶ್ರೇಣಿ) ಅಧಿಕಾರಿ ಅವರ ಜಾತಿ ಕುರಿತು ತನಿಖೆ ನಡೆದು ಮೇಲೆ ಓದಲಾದ ದಿನಾಂಕ: 23.08.2003ರ ಸರ್ಕಾರಿ ಆದೇಶದಲ್ಲಿ ಅವರು 'ಕಾಡು ಕುರುಬ' ಜಾತಿಗೆ ಸೇರಿದವರೆಂದು ಸ್ಥಿರೀಕರಿಸಲಾಗಿತ್ತು. ಅನಂತರ ಪರಾಮರ್ಶಿಸಲಾಗಿ ಜಾತಿಯನ್ನು ಸ್ಥಿರೀಕರಿಸುವ ವಿಷಯ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ವ್ಯಾಪ್ತಿಯಲ್ಲಿ ಬರುವುದಿಲ್ಲವಾದ ಕಾರಣ ಸದರೀ ಆದೇಶವನ್ನು ರದ್ದುಪಡಿಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 23 ಎಸ್‌ಇಎನ್ 2003, ಬೆಂಗಳೂರು, ದಿನಾಂಕ: 15ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಸರ್ಕಾರಿ ಆದೇಶ ಕ್ರಮಾಂಕ ಸಿಆಸುಇ 23 ಎಸ್‌ಇಎನ್ 2003, ದಿನಾಂಕ: 23.08.2003ನ್ನು ತಕ್ಷಣದಿಂದ ಜಾರಿಗೆ ಬರುವಂತೆ ರದ್ದುಪಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್‌ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1330 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-3).

## ಕಾನೂನು ಸಚಿವಾಲಯ

**ವಿಷಯ:** ಶ್ರೀ ಎ.ಎಸ್. ನಾಗರಾಜ್, ನೋಟರಿ, ಚಿಂತಾಮಣಿ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದು ಹಾಕುವ ಬಗ್ಗೆ.

**ಓದಲಾಗಿದೆ:**
1) ಗಣಿ ಮತ್ತು ಭೂಗರ್ಭ ಸಚಿವರ ನಡವಳಿ ದಿನಾಂಕ: 13.09.2001.
2) ಸರ್ಕಾರಿ ಪತ್ರ ಸಂಖ್ಯೆ: ಲಾ 220 ಎಲ್‌ಸಿಎಲ್ 01, ದಿನಾಂಕ: 12.11.2001.
3) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರ ಪತ್ರ ಎಂ.ಟಿ.ನಂ.4527:2002, ದಿನಾಂಕ: 30.05.2002.
4) ಸರ್ಕಾರಿ ಸಮ ಸಂಖ್ಯೆ: ಪತ್ರ ದಿನಾಂಕ: 23.09.02.
5) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರ ಪತ್ರಗಳು ದಿನಾಂಕ: 04.07.2003, ಮತ್ತು 10.07.2003.

**ಪ್ರಸ್ತಾವನೆ:**

ಶ್ರೀ ಎ.ಎಸ್. ನಾಗರಾಜ್, ನೋಟರಿ, ಚಿಂತಾಮಣಿ ಇವರನ್ನು ಸರ್ಕಾರಿ ಆದೇಶ ಸಂಖ್ಯೆ: ಲಾ 171 ಎಲ್‌ಸಿಎಲ್ 92, ದಿನಾಂಕ: 03.02.93 ರಂದು ಚಿಂತಾಮಣಿ ಕಂದಾಯ ತಾಲ್ಲೂಕಿಗೆ ನೋಟರಿಯಾಗಿ ನೇಮಕ ಹೊಂದಿರುತ್ತಾರೆ. ಮೇಲೆ ಓದಲಾದ (1) ದಿನಾಂಕ: 13.09.01ರ ನಡವಳಿಯಲ್ಲಿ ಸದರಿ ನೋಟರಿಯವರು ಕಳೆದ ಒಂದು ಸಾಲಿನಿಂದ ನೋಟರಿ ಕರ್ತವ್ಯ ನಿರ್ವಹಿಸುತ್ತಿಲ್ಲವೆಂದು ಸಾರ್ವಜನಿಕರಿಗೆ ತೊಂದರೆಯಾಗುತ್ತಿದೆಯೆಂದು ತಿಳಿಸಿರುತ್ತಾರೆ.

ಮೇಲೆ ಓದಲಾದ (2) ದಿನಾಂಕ: 12.11.01ರ ಸರ್ಕಾರಿ ಪತ್ರದಲ್ಲಿ ಈ ಬಗ್ಗೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರನ್ನು ಕೋರಲಾಗಿ ದಿನಾಂಕ:30.05.02ರ ಪತ್ರದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಕೋಲಾರ ಇವರು ಸದರಿ ನೋಟರಿಯವರು ಕಳೆದ ಒಂದು ಸಾಲಿನಿಂದ ಯಾವುದೇ ನೋಟರಿ ಕರ್ತವ್ಯನಿರ್ವಹಿಸುತ್ತಿಲ್ಲವೆಂದು ಮತ್ತು ವೃತ್ತಿ ಪ್ರಮಾಣ ಪತ್ರ ನವೀಕರಣ ಕೋರಿ ಯಾವುದೇ ಪ್ರಸ್ತಾವನೆ ಸಲ್ಲಿಸಿಲ್ಲವೆಂದು ವರದಿ ನೀಡಿರುತ್ತಾರೆ.

ಮೇಲೆ ಓದಲಾದ (4) ದಿನಾಂಕ:23.09.02ರ ಸರ್ಕಾರಿ ಪತ್ರದಲ್ಲಿ ನೋಟರಿಯವರನ್ನು ವೃತ್ತಿ ಪ್ರಮಾಣ ಪತ್ರ ನವೀಕರಣ ಪ್ರಸ್ತಾವನೆ ಸಲ್ಲಿಸಿರುವ ಬಗ್ಗೆ ಮತ್ತು ಕಾರ್ಯ ನಿರ್ವಹಿಸುತ್ತಿರುವ ಬಗ್ಗೆ ಲಿಖಿತ ಹೇಳಿಕೆ ಕೋರಲಾಗಿತ್ತು ಇದುವರೆವಿಗೂ ನೋಟರಿಯವರಿಂದ ಯಾವುದೇ ಉತ್ತರ ಸ್ವೀಕೃತವಾಗಿರುವುದಿಲ್ಲ.

ಮೇಲೆ ಓದಲಾದ (5) ದಿನಾಂಕ: 04.07.03 ಮತ್ತು 10.07.03ರ ಪತ್ರಗಳಲ್ಲಿ ಜಿಲ್ಲಾ ಸತ್ರ ನ್ಯಾಯಾಧೀಶರು, ಕೋಲಾರ ಇವರು ನೋಟರಿಯವರು ನೋಟರಿ ಸರ್ಟಿಫಿಕೇಟನ್ನು ನವೀಕರಿಸಲು ಯಾವುದೇ ಪ್ರಸ್ತಾವನೆ ಸಲ್ಲಿಸಿಲ್ಲವೆಂದೂ ಹಾಗೂ ನೋಟರಿ ಕರ್ತವ್ಯ ನಿರ್ವಹಿಸುತ್ತಿರುವ ಬಗ್ಗೆ ಯಾವ ಸಾಕ್ಷ್ಯಾಧಾರಗಳು ಇಲ್ಲವೆಂದು ತಿಳಿಸಿರುತ್ತಾರೆ.

ಮೇಲಿನ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 220 ಎಲ್‌ಸಿಎಲ್ 2001, ಬೆಂಗಳೂರು, ದಿನಾಂಕ:7ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಎ.ಎಸ್. ನಾಗರಾಜ, ನೋಟರಿ, ಚಿಂತಾಮಣಿ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದುಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶ್ರೀಧರ್**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಕಾನೂನು ಇಲಾಖೆ (ಆಡಳಿತ-2).

ಪಿ.ಆರ್. 1331

**ವಿಷಯ:** ಶ್ರೀ ಆರ್.ಸಿ. ಶಿವಪೂಜಿ, ನೋಟರಿ, ಬಿಜಾಪುರ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದು ಹಾಕುವ ಬಗ್ಗೆ ಆದೇಶ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 173 ಎಲ್‌ಸಿಎಲ್ 94, ದಿನಾಂಕ:21.05.95.
2) ದಿನಾಂಕ:06.08.2001ರ ನೋಟರಿಯವರ ಮನವಿಯೊಂದಿಗೆ ಜಿಲ್ಲಾ ಸತ್ರನ್ಯಾಯಾಧೀಶರು, ಬಿಜಾಪುರ ಇವರ ಪತ್ರ ದಿನಾಂಕ: 13.08.01.
3) ಸರ್ಕಾರಿ ಆದೇಶ ಸಂಖ್ಯೆ: ಲಾ 178 ಎಲ್‌ಸಿಎಲ್ 99, ದಿನಾಂಕ:09.12.99.
4) ಸರ್ಕಾರಿ ಸಮ ಸಂಖ್ಯೆ: ಪತ್ರಗಳು ದಿನಾಂಕ: 19.06.01 ಮತ್ತು 16.07.02.
5) WP No. 15161:2002, ದಿನಾಂಕ:04.04.02.
6) ಸರ್ಕಾರಿ ಆದೇಶ ಸಂಖ್ಯೆ: ಲಾ 118 ಎಲ್‌ಸಿಎಲ್ 01, ದಿನಾಂಕ: 17.01.03.
7) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬಿಜಾಪುರ ಇವರ ಪತ್ರ ದಿನಾಂಕ:05.04.03.

**ಪ್ರಸ್ತಾವನೆ:**

ಶ್ರೀ ಆರ್.ಸಿ. ಶಿವಪೂಜಿ, ನೋಟರಿ, ಬಿಜಾಪುರ ಇವರನ್ನು ಮೇಲಿನ ಕ್ರಮಾಂಕ (1)ರಲ್ಲಿ ಓದಲಾದ ದಿನಾಂಕ: 21.05.95ರ ಸರ್ಕಾರಿ ಆದೇಶದಲ್ಲಿ ಬಿಜಾಪುರ ಕಂದಾಯ ಕ್ಷೇತ್ರದ ನೋಟರಿಯನ್ನಾಗಿ ನೇಮಿಸಿ ದಿನಾಂಕ:19.07.1995 ರಿಂದ ನೋಟರಿಯಾಗಿ ಕರ್ತವ್ಯ ನಿರ್ವಹಿಸಲು ವೃತ್ತಿ ಪ್ರಮಾಣ ಪತ್ರ ನೀಡಲಾಗಿದೆ. ವೃತ್ತಿ ಪ್ರಮಾಣ ಪತ್ರ ಪಡೆದ ನಂತರ ಕಾಲಕಾಲಕ್ಕೆ ಪ್ರತಿ 3 ವರ್ಷಗಳಿಗೊಮ್ಮೆ

ನವೀಕರಿಸಿಕೊಂಡು ಕರ್ತವ್ಯ ನಿರ್ವಹಿಸುವಂತೆ ಸೂಚಿಸಲಾಗಿತ್ತು ಈ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (2)ರ ದಿನಾಂಕ:06.08.2001ರ ಮನವಿಯಲ್ಲಿ ತಮ್ಮ ವೃತ್ತಿ ಪ್ರಮಾಣ ಪತ್ರವನ್ನು ದಿನಾಂಕ: 19.07.2001ರಿಂದ ನವೀಕರಿಸುವಂತೆ ಕೋರಿದ್ದು ಜಿಲ್ಲಾ ಸತ್ರನ್ಯಾಯಾಧೀಶರು ದಿನಾಂಕ:13.08.01ರ ಪತ್ರದೊಂದಿಗೆ ಸರ್ಕಾರಕ್ಕೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ.

ಬಿಜಾಪುರ ಬಾರ್ ಅಸೋಸಿಯೇಷನ್‌ನ ಕೆಲವು ಸದಸ್ಯರುಗಳು ಸದರಿ ನೋಟರಿಯವರ ವಿರುದ್ಧ ಕೆಲವೊಂದು ದೂರುಗಳನ್ನು ಸಲ್ಲಿಸಿದ್ದು ಅದರ ಬಗ್ಗೆ ವಿಚಾರಣೆ ನಡೆಸಿ ವಿಚಾರಣಾ ವರದಿ ನೀಡುವಂತೆ ಮೇಲೆ ಕ್ರಮಾಂಕ (3)ರಲ್ಲಿ ಓದಲಾದ ಸರ್ಕಾರಿ ಆದೇಶ ಲಾ 178 ಎಲ್‌ಸಿಎಲ್ 99, ದಿನಾಂಕ: 09.12.99ರ ಆದೇಶದಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರನ್ನು ವಿಚಾರಣಾಧಿಕಾರಿಗಳನ್ನಾಗಿ ನೇಮಿಸಿ 2 ತಿಂಗಳೊಳಗೆ ವಿಚಾರಣಾ ವರದಿ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಮೇಲಿನ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕ:19.06.01; 16.07.02ರ ಸರ್ಕಾರಿ ಸಮ ಸಂಖ್ಯೆ: ಪತ್ರಗಳಲ್ಲಿ ಜ್ಞಾಪನ ಪತ್ರಗಳನ್ನು ಹೊರಡಿಸಿದ್ದರೂ ಸಹ ವಿಚಾರಣಾ ವರದಿ ಸ್ವೀಕೃತವಾಗಿರುವುದಿಲ್ಲ. ವೃತ್ತಿ ಪ್ರಮಾಣ ಪತ್ರದ ಅವಧಿ ಅಂತ್ಯಗೊಂಡು ನವೀಕರಣ ಪ್ರಮಾಣ ಪತ್ರ ಸ್ವೀಕೃತವಾಗಿಲ್ಲವೆಂದು ನೋಟರಿಯವರು W.P. 15161:2002 ನ್ನು ಉಚ್ಚನ್ಯಾಯಾಲಯದಲ್ಲಿ ದಾಖಲಿಸಿದ್ದು, ಮೇಲೆ ಓದಲಾದ ಕ್ರಮಾಂಕ (5)ರ ದಿನಾಂಕ: 04.04.02ರ ಆದೇಶದಲ್ಲಿ ಉಚ್ಚನ್ಯಾಯಾಲಯವು W.P. ನ್ನು ಪರಿಗಣಿಸುವಂತೆ (Consider) ಆದೇಶ ನೀಡಿತ್ತು.

ಉಚ್ಚನ್ಯಾಯಾಲಯದ ಆದೇಶವನ್ನು ಜಾರಿಗೊಳಿಸುವ ಸಲುವಾಗಿ ಮೇಲೆ ಓದಲಾದ ಕ್ರಮಾಂಕ (6)ರ ಸರ್ಕಾರಿ ಆದೇಶ ಲಾ 118 ಎಲ್‌ಸಿಎಲ್ 01, ದಿನಾಂಕ:17.01.2003ರ ಆದೇಶದಲ್ಲಿ ಅನ್ವಯಿಸುವ ದಿನಾಂಕದಿಂದ ನವೀಕರಿಸಬಹುದಾಗಿದೆಯೆಂದು ಆದೇಶಿಸಲಾಗಿತ್ತು. ಏತನ್ಮಧ್ಯೆ ಜಿಲ್ಲಾ ಸತ್ರನ್ಯಾಯಾಧೀಶರು ಬಿಜಾಪುರ ಇವರು ಮೇಲೆ ಓದಲಾದ ಕ್ರಮಾಂಕ (7) ದಿನಾಂಕ:05.04.03ರ ಪತ್ರದಲ್ಲಿ ಸದರಿ ನೋಟರಿಯವರು 01.01.2002 ರಿಂದ 31.12.2002ರವರೆಗೆ ನೋಟರಿ ಕರ್ತವ್ಯ ನಿರ್ವಹಿಸಿರುವುದು ನೋಟರಿ ರಿಜಿಸ್ಟರ್ ತಪಾಸಣೆಯಿಂದ ತಿಳಿದು ಬರುವುದಾಗಿ ವರದಿ ನೀಡಿರುತ್ತಾರೆ.

ವೃತ್ತಿ ಪ್ರಮಾಣ ಪತ್ರ ನವೀಕರಿಸಿಕೊಳ್ಳದೆ ಅವಧಿ ಮುಗಿದ ನಂತರವೂ ನೋಟರಿ ಕರ್ತವ್ಯ ನಿರ್ವಹಿಸಿ ನೋಟರಿ ಕಾಯ್ದೆ 9(1)ನ್ನು ಉಲ್ಲಂಘಿಸಿರುವುದು ತಪಾಸಣಾ ವರದಿಯಿಂದ ದೃಢಪಟ್ಟಿರುತ್ತದೆ. ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 118 ಎಲ್‌ಸಿಎಲ್ 01, ಬೆಂಗಳೂರು, ದಿನಾಂಕ:6ನೇ ಅಕ್ಟೋಬರ್, 2003**

ಶ್ರೀ ಆರ್.ಸಿ. ಶಿವಪೂಜಿ, ನೋಟರಿ, ಬಿಜಾಪುರ ಇವರು ವೃತ್ತಿ ಪ್ರಮಾಣ ಪತ್ರ ನವೀಕರಿಸಿಕೊಳ್ಳದೆ ವೃತ್ತಿ ಪ್ರಮಾಣ ಪತ್ರದ ಅವಧಿ 19.03.01 ನಂತರ ನೋಟರಿ ಕರ್ತವ್ಯ ನಿರ್ವಹಿಸಿ ನೋಟರಿ ಕಾಯ್ದೆ 9(1)ನ್ನು ಉಲ್ಲಂಘಿಸಿರುವುದು ತಪಾಸಣಾ ವರದಿಯಿಂದ ದೃಢಪಟ್ಟಿದೆ. ಆದ್ದರಿಂದ ನೋಟರಿ ನಿಯಮಾವಳಿ 1956ರ ನಿಯಮ 13(1)ರ ಪ್ರಕಾರ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶ್ರೀಧರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಪಿ.ಆರ್. 1332 ಕಾನೂನು ಇಲಾಖೆ (ಆಡಳಿತ-2).

**ವಿಷಯ:** ಶ್ರೀ ಆರ್.ಆರ್. ಭಟಕುರ್ಕಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ ಬಿಜಾಪುರ ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ನೇಮಿಸಿದ್ದ ಮಂಡನಾಧಿಕಾರಿಯವರನ್ನು ಬದಲಾಯಿಸುವ ಬಗ್ಗೆ.

**ಓದಲಾಗಿದೆ:** 1) ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಬೆಂಗಳೂರು ರವರ ಪತ್ರ ಸಂ. ಡಿಪಿಎನ್:ಟಿಎಂಕೆ:239:2000.

2) ಸರ್ಕಾರದ ಆದೇಶ ಸಂಖ್ಯೆ: ಲಾ 162 ಪಿಪಿಇ, 02, ದಿನಾಂಕ: 02.05.03.

**ಪ್ರಸ್ತಾವನೆ:**

ಶ್ರೀ ಆರ್.ಆರ್. ಭಟಕುರ್ಕಿ, ಸರ್ಕಾರಿ ಅಭಿಯೋಜಕರು, ವಿಶೇಷ ನ್ಯಾಯಾಲಯ ಬಿಜಾಪುರರವರ ವಿರುದ್ಧದ ಆರೋಪಗಳ ಬಗ್ಗೆ ಇಲಾಖಾ ವಿಚಾರಣೆ ನಡೆಸಲು ಬೆಂಗಳೂರಿನಲ್ಲಿರುವ ನಿವೃತ್ತ ಜಿಲ್ಲಾ ನ್ಯಾಯಾಧೀಶರನ್ನು ವಿಚಾರಣಾಧಿಕಾರಿಯವರನ್ನಾಗಿ ಮತ್ತು ಶ್ರೀ ಮೋಹನ್ ಟಿ. ಕುಲಕರ್ಣಿ ಇವರನ್ನು ಮಂಡನಾಧಿಕಾರಿಯನ್ನಾಗಿ ಮೇಲೆ ಓದಲಾದ ಕ್ರಮಾಂಕ (2) ಸರ್ಕಾರದ ಆದೇಶದಲ್ಲಿ ನೇಮಕ ಮಾಡಲಾಗಿದೆ. ಪ್ರಕರಣದ ವಿಚಾರಣೆಗೆ ಮಂಡನಾಧಿಕಾರಿಯವರು ಬೆಳಗಾವಿಯಿಂದ ಬೆಂಗಳೂರಿಗೆ, ಬೆಂಗಳೂರಿನಿಂದ ಬೆಳಗಾವಿಗೆ ಬಂದು ಹೋಗಲು ಹೆಚ್ಚಿನ ಸಮಯವಕಾಶ ಬೇಕಾಗುತ್ತದೆ ಹಾಗೂ ಸದರಿ ಅಧಿಕಾರಿಯವರಿಗೆ ನಿಯಮಾನುಸಾರ ಪ್ರಯಾಣ ಭತ್ಯೆ, ದಿನಭತ್ಯೆ ಪಾವತಿಸಬೇಕಾಗುತ್ತದೆ. ಆದ್ದರಿಂದ ಇವರ ಬದಲಿಗೆ ಬೆಂಗಳೂರಿನ ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ಕೇಂದ್ರ ಕಛೇರಿಯಲ್ಲಿರುವ ಅಭಿಯೋಗ ಉಪ ನಿರ್ದೇಶಕರಾದ, ಶ್ರೀ ಎಂ.ಕೆ. ರುದ್ರಪ್ಪ, ರವರನ್ನು ಮಂಡನಾಧಿಕಾರಿಯಾಗಿ ನೇಮಿಸಿ ಮಾರ್ಪಾಡು ಆದೇಶ ಹೊರಡಿಸಬೇಕೆಂದು ಅಭಿಯೋಗ ನಿರ್ದೇಶಕರು ಮೇಲೆ ಓದಲಾದ ಕ್ರಮಾಂಕ (1)ರ ತಮ್ಮ ಪತ್ರದಲ್ಲಿ ಸರ್ಕಾರವನ್ನು ಕೋರಿರುತ್ತಾರೆ. ಅವರ ಕೋರಿಕೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 162 ಪಿಪಿಇ 02, ಬೆಂಗಳೂರು, ದಿನಾಂಕ:9ನೇ ಅಕ್ಟೋಬರ್, 2003**

ಸರ್ಕಾರಿ ಆದೇಶ ಲಾ 162 ಪಿಪಿಇ, 02, ದಿನಾಂಕ: 02.05.03ರಲ್ಲಿ ಸದರಿ ಪ್ರಕರಣದ ಮಂಡನಾಧಿಕಾರಿಯಾಗಿ ನೇಮಿಸಿದ್ದ ಶ್ರೀ ಮೋಹನ್ ಟಿ. ಕುಲಕರ್ಣಿ, ಅಭಿಯೋಗ ಉಪ ನಿರ್ದೇಶಕರು, ಬೆಳಗಾ ಇವರ ಬದಲಿಗೆ ಕೆಸಿಎಸ್ (ಸಿಸಿಎ) ನಿಯಮಾವಳಿ 1957ರ

ನಿಯಮ 11(5) (ಸಿ) ರನ್ವಯ ಶ್ರೀ ಎಂ.ಕೆ. ರುದ್ರಪ್ಪ, ಅಭಿಯೋಗ ಉಪ ನಿರ್ದೇಶಕರು, ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆ ಕೇಂದ್ರ ಕಛೇರಿ ಬೆಂಗಳೂರು ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ.

ಉಳಿದಂತೆ ದಿನಾಂಕ: 02.05.03ರ ಸರ್ಕಾರಿ ಆದೇಶದಲ್ಲಿ ಯಾವುದೇ ಬದಲಾವಣೆಗಳಿರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶ್ರೀಧರ್**

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),

ಪಿ.ಆರ್. 1333 ಕಾನೂನು ಇಲಾಖೆ (ಆಡಳಿತ-2).

**ಕಂದಾಯ ಸಚಿವಾಲಯ**

**ಆದೇಶ ಸಂಖ್ಯೆ: ಕಂಇ 257 ಮುನೋಮು 03, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್, 2003**

ಕರ್ನಾಟಕ ಮುದ್ರಾಂಕ ಅಧಿನಿಯಮ, 1957ರ (1957ರ ಕರ್ನಾಟಕ ಕಾಯ್ದೆ 34) ಕಲಂ 9(1) (ಎ)ರಲ್ಲಿ ಪ್ರದತ್ತವಾದ ಅಧಿಕಾರದಂತೆ, ಗುಲ್ಬರ್ಗಾ ಜಿಲ್ಲೆಯ ನೀರಾವರಿ ಯೋಜನೆಗಳಾದ ಗಂಡೋರಿನಾಲಾ, ಬೆಣ್ಣೆತೋರ, ಅಪ್ಪರಮುಲ್ಲಮಾರಿ, ಲೋವರ ಮುಲ್ಲಾಮಾರಿ ಹಾಗೂ ಅಮರ್ಜಿಯಲ್ಲಿ ಮುಳುಗಡೆಯಾದ ಪ್ರದೇಶದಲ್ಲಿ ಸ್ಥಿರಾಸ್ತಿಗಳನ್ನು ಕಳೆದುಕೊಂಡ ಸಂತ್ರಸ್ಥ ಕುಟುಂಬದವರಿಗೆ ದೊರೆಯಬಹುದಾದ ಪರಿಹಾರ ಧನ ಮತ್ತು ಸಹಾಯ ಧನದ ಮೊತ್ತದಲ್ಲಿ ಖರೀದಿಸುವ ಸ್ಥಿರಾಸ್ತಿಗಳಿಗೆ ನೋಂದಣಿ ಮಾಡಿಸುವಾಗ ಬರೆದುಕೊಡುವ ಪತ್ರಗಳಿಗೆ ಸಂಬಂಧಿಸಿದಂತೆ ಆದೇಶ ಸಂಖ್ಯೆ: ಕಂಇ 316 ಮುನೋಮು 2002, ದಿನಾಂಕ: 04.12.2002ರಲ್ಲಿ ನೀಡಿರುವ ಮುದ್ರಾಂಕ ಶುಲ್ಕ ವಿನಾಯಿತಿ ಕಾಲಾವಕಾಶ ಸದರಿ ಆದೇಶದಲ್ಲಿ ನಮೂದಿಸಿರುವ ದಿನಾಂಕದವರೆಗೆ ಪುನರ್ ಸ್ಥಾಪಿಸಿ ಮುಂದುವರೆಸಲಾಗಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 946 ವೆಚ್ಚ 7:03, ದಿನಾಂಕ: 15.09.2003ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶೈಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1334 ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಶಿವಮೊಗ್ಗ ನಗರ ಸಮುದಾಯ ಅಭಿವೃದ್ಧಿ ಸಂಘ ಸ್ವರ್ಣಜಯಂತಿ ರೋಜಗಾರ ಯೋಜನೆ ನಗರ ಸಭೆ ಕಾರ್ಯಾಲಯ, ಶಿವಮೊಗ್ಗ ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** 1) ಜಿಲ್ಲಾ ನೋಂದಣಾಧಿಕಾರಿ, ಶಿವಮೊಗ್ಗ ಜಿಲ್ಲೆ ಅವರ ವರದಿ ಸಂಖ್ಯೆ: ಜಿನೋಕ: ಸೊಸೈಟಿ:2: 2003-04, ದಿನಾಂಕ: 20.08.2003.

2) ಸರ್ಕಾರದ ಕಾರಣ ಕೇಳುವ ನೋಟೀಸ್ ಸಂಖ್ಯೆ: ಕಂಇ 28 ಮುನೋಸೋ 2003, ದಿನಾಂಕ: 03.09.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 20.08.2003ರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಶಿವಮೊಗ್ಗ ಜಿಲ್ಲೆ ಅವರು ವರದಿ ಸಲ್ಲಿಸುತ್ತಾ ಶಿವಮೊಗ್ಗ ನಗರ ಸಮುದಾಯ ಅಭಿವೃದ್ಧಿ ಸಂಘ ಸ್ವರ್ಣ ಜಯಂತಿ ರೋಜಗಾರ ಯೋಜನೆ ನಗರ ಸಭೆ ಕಾರ್ಯಾಲಯ, ಶಿವಮೊಗ್ಗ ಈ ಸಂಸ್ಥೆಯು 1998ರಲ್ಲಿ ಸಂಘಗಳ ನೋಂದಣಿ ಕಾಯ್ದೆ ಪ್ರಕಾರ ನೋಂದಾಯಿಸಿದ್ದು, ಇಲ್ಲಿಯವರೆಗೂ ಸರ್ವಸದಸ್ಯರ ಸಭೆ, ಕಾರ್ಯಕಾರಿ ಮಂಡಳಿ ಪಟ್ಟಿ ಹಾಗೂ ಸಂಸ್ಥೆಯ ಲೆಕ್ಕಪತ್ರಗಳನ್ನು ಒಪ್ಪಿಸದೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ ಕಲಂ 11,12 ಮತ್ತು 13ಗಳ ಉಲ್ಲಂಘನೆ ಮಾಡಿದೆ. ಈ ಕುರಿತು ಸಂಘಕ್ಕೆ ನೋಟೀಸ್ ಜಾರಿ ಮಾಡಲಾಗಿ ಸಂಘವು ಸಮಜಾಯಿಷಿ ಉತ್ತರ ನೀಡಿಲ್ಲವಾದ್ದರಿಂದ ಸಂಸ್ಥೆಯನ್ನು ಸರಿದಾರಿಗೆ ತರುವ ದೃಷ್ಟಿಯಿಂದ ಆಡಳಿತಾಧಿಕಾರಿ ನೇಮಕ ಮಾಡಲು ಸರ್ಕಾರಕ್ಕೆ ಶಿಫಾರಸ್ಸು ಮಾಡಿರುತ್ತಾರೆ. ಜಿಲ್ಲಾ ನೋಂದಣಾಧಿಕಾರಿಗಳ ವರದಿಯನ್ನು ಪರಿಶೀಲಿಸಿ ಸರ್ಕಾರವು ಓದಲಾದ (2)ರ ಪ್ರಕಾರ ಸಂಘಕ್ಕೆ ಕಾರಣ ಕೇಳುವ ನೋಟೀಸ್‌ನ್ನು ದಿನಾಂಕ: 03.09.2003ರಂದು ಜಾರಿ ಮಾಡಿ ಸಂಘಕ್ಕೆ ಏಕೆ ಆಡಳಿತಾಧಿಕಾರಿ ನೇಮಕ ಮಾಡಬಾರದೆಂದು ವಿವರಣೆ ಕೋರಿ ಜಾರಿ ಮಾಡಲಾಯಿತು. ಸಂಘವು ನಿಗದಿತ ಅವಧಿಯು ಮುಗಿದಿದ್ದರೂ ಇಲ್ಲಿಯವರೆಗೂ ಯಾವುದೇ ಲಿಖಿತ ಹೇಳಿಕೆ ನೀಡಿರುವುದಿಲ್ಲ. ಸಂಘವು ಸರ್ಕಾರದ ಕಾರಣ ಕೇಳುವ ನೋಟೀಸಿಗೆ ಹೇಳಿಕೆ ನೀಡದೆ ಇರುವುದನ್ನು ಗಂಭೀರವಾಗಿ ಪರಿಗಣಿಸಿದ ಸರ್ಕಾರವು ಜಿಲ್ಲಾ ನೋಂದಣಾಧಿಕಾರಿಗಳ ಶಿಫಾರಸ್ಸನ್ನು ಒಪ್ಪಿಕೊಂಡು ಸಾರ್ವಜನಿಕ ಹಿತದೃಷ್ಟಿಯಿಂದ ಸದರಿ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲು ತೀರ್ಮಾನಿಸಿದೆ ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 28 ಮುನೋಸೊ 2003, ಬೆಂಗಳೂರು, ದಿನಾಂಕ:9ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಶಿವಮೊಗ್ಗ ನಗರ ಸಮುದಾಯ ಅಭಿವೃದ್ಧಿ ಸಂಘ ಸ್ವರ್ಣ ಜಯಂತಿ ರೋಜಗಾರ್ ಯೋಜನೆ ನಗರ ಸಭೆ ಕಾರ್ಯಾಲಯ ಶಿವಮೊಗ್ಗ ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಸಾರ್ವಜನಿಕ ಹಿತದೃಷ್ಟಿಯಿಂದ ಉಪ ವಿಭಾಗಾಧಿಕಾರಿ, ಶಿವಮೊಗ್ಗ ಉಪ ವಿಭಾಗ ಇವರನ್ನು 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಆಡಳಿತಾಧಿಕಾರಿ ನೇಮಕ ಮಾಡಿದೆ.

ಆಡಳಿತಾಧಿಕಾರಿಗಳು ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶೈಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1335 ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ನವೋದಯ ಎಜುಕೇಶನ್ ಸೊಸೈಟಿ, ಚಿಕ್ಕನಾಯ್ಕನ ಹಳ್ಳಿ, ಈ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಕುರಿತು.

**ಓದಲಾಗಿದೆ:** 1) ಜಿಲ್ಲಾ ನೋಂದಣಾಧಿಕಾರಿಗಳು, ತುಮಕೂರು ಜಿಲ್ಲೆ, ತುಮಕೂರು ಅವರ ವರದಿ ಸಂಖ್ಯೆ: ಎಸ್.ಓ.ಸಿ. 17:80-81, ದಿನಾಂಕ: 20.02.2003.

2) ಸರ್ಕಾರದ ಕಾರಣಕೇಳುವ ನೋಟೀಸು ಸಂಖ್ಯೆ: ಕಂಇ 5 ಮುನೋಸೊ 2003, ದಿನಾಂಕ: 25.03.2003.

3) ಅಧ್ಯಕ್ಷರು: ಕಾರ್ಯದರ್ಶಿಗಳು ನವೋದಯ ವಿದ್ಯಾಸಂಸ್ಥೆ, ಚಿಕ್ಕನಾಯ್ಕನಹಳ್ಳಿ ಅವರ ಲಿಖಿತ ಹೇಳಿಕೆ ಸಂಖ್ಯೆ:ನ.ವಿ.ಸಂ.-01: 2003-04, ದಿನಾಂಕ: 08.04.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ದಿನಾಂಕ: 20.03.2003ರ ಪತ್ರದಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ತುಮಕೂರು ಅವರು ವರದಿ ನೀಡುತ್ತಾ ನವೋದಯ ವಿದ್ಯಾಸಂಸ್ಥೆ, ಚಿಕ್ಕನಾಯ್ಕನಹಳ್ಳಿ, ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಪ್ರಕಾರ ನೋಂದಾಯಿಸಿದೆ. ಸಂಸ್ಥೆಯ 2001ರ ವರೆಗಿನ ಕಾರ್ಯಕಾರಿ ಸಮಿತಿ ಪಟ್ಟಿ ಹಾಗೂ 31.12.2000ರ ವರೆಗಿನ ಲೆಕ್ಕ ಪತ್ರ ಫೈಲ್‌ಗಳನ್ನು ನ್ಯಾಯಾಲಯವು ಅನುರ್ಜಿತಗೊಳಿಸಿರುವುದರಿಂದ ಸಂಸ್ಥೆಯಲ್ಲಿ ಸಮಿತಿ ಅಸ್ತಿತ್ವದಲ್ಲಿ ಇರುವುದಿಲ್ಲ, ಸಂಸ್ಥೆಯಲ್ಲಿ ಸಮಾನಾಂತರ ಸಮಿತಿಗಳಿದ್ದ ಪ್ರಕರಣಗಳು ನ್ಯಾಯಾಲಯದಲ್ಲಿ ಇರುವುದರಿಂದ ಹೊಸ ಸಮಿತಿ ರಚನೆಗೊಂಡಿಲ್ಲ. ಆದ್ದರಿಂದ ಸಂಸ್ಥೆಯನ್ನು ಸರಿದಾರಿಗೆ ತರುವ ದೃಷ್ಟಿಯಿಂದ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲು ಶಿಫಾರಸ್ಸು ಮಾಡಿದ್ದಾರೆ. ಜಿಲ್ಲಾ ನೋಂದಣಾಧಿಕಾರಿಗಳ ಕಾರಣ ಕೇಳುವ ನೋಟೀಸು ಜಾರಿ ಮಾಡಿ ಅವರಿಂದ ಓದಲಾದ (3)ರ ಪ್ರಕಾರ ದಿನಾಂಕ: 08.04.2003ರಂದು ಲಿಖಿತ ಹೇಳಿಕೆ ಪಡೆಯಲಾಯಿತು.

ಜಿಲ್ಲಾ ನೋಂದಣಾಧಿಕಾರಿಗಳ ವರದಿ ಹಾಗೂ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 25ರ ಪ್ರಕಾರ ನಡೆಸಿದ ವಿಚಾರಣಾ ವರದಿ ಮತ್ತು ಸಂಸ್ಥೆಯ ಕಾರಣ ಕೇಳುವ ನೋಟೀಸಿಗೆ ನೀಡಿದ ಲಿಖಿತ ಹೇಳಿಕೆಯನ್ನು ಸುದೀರ್ಘವಾಗಿ ಪರಿಶೀಲಿಸಿ ಸಂಸ್ಥೆಯು ನೀಡಿದ ಲಿಖಿತ ಹೇಳಿಕೆಯನ್ನು ಒಪ್ಪದೆ ಸಂಸ್ಥೆಗೆ ಆಡಳಿತಾಧಿಕಾರಿ ನೇಮಕ ಮಾಡಲು ಸರ್ಕಾರವು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 5 ಮುನೊಸೊ 2003, ಬೆಂಗಳೂರು, ದಿನಾಂಕ: 13ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ನವೋದಯ ಎಜುಕೇಷನ್ ಸೊಸೈಟಿ, ಚಿಕ್ಕನಾಯ್ಕನಹಳ್ಳಿ, ತುಮಕೂರು ಜಿಲ್ಲೆ, ಈ ಸಂಸ್ಥೆಗೆ, ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಸಾರ್ವಜನಿಕ ಹಿತದೃಷ್ಟಿಯಿಂದ ತಹಶೀಲ್ದಾರ್, ಚಿಕ್ಕನಾಯ್ಕನಹಳ್ಳಿ, ತಾಲ್ಲೂಕ್ ತುಮಕೂರು ಜಿಲ್ಲೆ, ಇವರನ್ನು 6 ತಿಂಗಳ ಅವಧಿಗೆ ಅಥವಾ ಸಂಸ್ಥೆಗೆ ಚುನಾವಣೆ ನಡೆಸಿ, ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸುವವರೆಗೆ ಇದರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ನೇಮಕ ಮಾಡಲಾಗಿದೆ.

ಆಡಳಿತಾಧಿಕಾರಿಗಳು ಈ ಅವಧಿಯಲ್ಲಿ ಸಂಸ್ಥೆಗೆ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರ ಹಸ್ತಾಂತರಿಸಲು ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ದುಲ್ ಅಮೀದ್**

ಪೀಠಾಧಿಕಾರಿ (ಪ್ರಭಾರ),

ಪಿ.ಆರ್. 1336 ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** M/s IMTMA ಸಂಸ್ಥೆಯು ಸ್ಥಾಪಿಸಲಿರುವ Centre of Excellence & Exhibition Facility ಗೆ ಸಂಬಂಧಿಸಿದಂತೆ ಖರೀದಿಸಲಿರುವ ಜಮೀನಿಗೆ ತಗಲುವ ಮುದ್ರಾಂಕ ಶುಲ್ಕ ಮತ್ತು ನೋಂದಣಿ ಶುಲ್ಕದಲ್ಲಿ ವಿನಾಯಿತಿ ನೀಡುವ ಬಗ್ಗೆ.

**ಓದಲಾಗಿದೆ:** 1) ಸರ್ಕಾರದ ಆದೇಶ ಸಂಖ್ಯೆ: ಐಡಿಡಿ 219 ಐಡಿಎಂ 2003, ದಿನಾಂಕ: 18.09.2003.

2) ಕಾರ್ಯನಿರ್ವಾಹಕ ನಿರ್ದೇಶಕರು, IMTMA, ಬೆಂಗಳೂರು ರವರ ಪತ್ರ ಸಂಖ್ಯೆ: IMTMA/LND/01, ದಿನಾಂಕ: 22.09.2003.

3) ವ್ಯವಸ್ಥಾಪಕ ನಿರ್ದೇಶಕರು, NICEL ರವರ ಪತ್ರ ಸಂಖ್ಯೆ: NICEL/FO/07/151, ದಿನಾಂಕ: 08.07.2003.

**ಪ್ರಸ್ತಾವನೆ:**

ಮೂಲಭೂತ ಸೌಕರ್ಯಗಳ ಅಭಿವೃದ್ಧಿ ಇಲಾಖೆಯು ಮೇಲೆ ಓದಲಾದ ಆದೇಶ ದಿನಾಂಕ: 18.09.2003ರಲ್ಲಿ ಮೂಲಭೂತ ಸೌಕರ್ಯಗಳ ಅಭಿವೃದ್ಧಿ ನೀತಿಯಡಿಯಲ್ಲಿ ಮೆ: ಇಂಡಿಯನ್ ಮಷೀನ್ ಟೂಲ್ ಮ್ಯಾನುಫ್ಯಾಕ್ಚರರ್ಸ್ ಅಸೋಸಿಯೇಷನ್ (IMTMA) ರವರಿಗೆ infrastructure facility of machine tool design, training center, workshop and a large Convention-cum-Exhibition facilityಯನ್ನು ರೂ. 78 ಕೋಟಿಗಳ ಬಂಡವಾಳದೊಂದಿಗೆ ಸ್ಥಾಪಿಸಲು ಹೊಂದುವ ಜಮೀನಿಗೆ ಮುದ್ರಾಂಕ ಶುಲ್ಕದಲ್ಲಿ ಶೇ.50ರಷ್ಟು ವಿನಾಯಿತಿ ಹಾಗೂ ನೋಂದಣಿ ಶುಲ್ಕದಲ್ಲಿ ರೂ. 1,000ಕ್ಕೆ ರೂ. 1.00 ರಂತೆ ನೋಂದಣಿ ಶುಲ್ಕದಲ್ಲಿ ವಿನಾಯಿತಿ ನೀಡಲು ಆದೇಶಿಸಿದೆ. ಈ ಆದೇಶದಲ್ಲಿ ಸದರಿ ಸಂಸ್ಥೆಯು ಸ್ವಾಧೀನ ಪಡಿಸಿಕೊಳ್ಳಲಾಗುವ ಜಮೀನಿನ ಸರ್ವೆ ನಂ., ಸ್ಥಳ ಹಾಗೂ ವಿಸ್ತೀರ್ಣದ ವಿವರಗಳನ್ನು ಕಂದಾಯ ಇಲಾಖೆಗೆ ತಿಳಿಸಲು ಸೂಚಿಸಿದೆ.

ಕ್ರಮ ಸಂಖ್ಯೆ: 2ರಲ್ಲಿ ಓದಲಾದ ಪತ್ರದಲ್ಲಿ IMTMA ಸಂಸ್ಥೆಯ ಕಾರ್ಯ ನಿರ್ವಾಹಕ ನಿರ್ದೇಶಕರು, ಕೆ.ಐ.ಎ.ಡಿ.ಬಿ. ಯು NICEL ಗೆ ಹಂಚಿಕೆ ಮಾಡಿರುವ 166 ಎಕರೆ ಜಮೀನಿನಲ್ಲಿ 38 ಎಕರೆ ಜಮೀನನ್ನು ಖರೀದಿಸುವುದಾಗಿಯೂ ಪ್ರತಿ ಎಕರೆಗೆ ರೂ. 10.00 ಲಕ್ಷಗಳು ತಗಲುವುದೆಂದು ತಿಳಿಸಿ ಖರೀದಿಸಲು ಉದ್ದೇಶಿಸಲಾಗಿರುವ ಜಮೀನಿನ ವಿವರಗಳನ್ನು ಈ ಕೆಳಕಂಡಂತೆ ನೀಡಿ, ಸರ್ಕಾರದ ಆದೇಶ

ಸಂಖ್ಯೆ: ಐಡಿಡಿ 219 ಐಡಿಎಂ 2003, ದಿನಾಂಕ: 18.09.2003ರಲ್ಲಿ ಮುದ್ರಾಂಕ ಶುಲ್ಕ ಹಾಗೂ ನೋಂದಣಿ ಶುಲ್ಕದಲ್ಲಿ ವಿನಾಯಿತಿ ನೀಡಿರುವಂತೆ ವಿನಾಯಿತಿಯನ್ನು ನೀಡಲು ಕೋರಿದೆ.

| Village | Survey No. | EXTENT<br>A - G |
|---|---|---|
| Madanayakanahalli | 30 | 17-22 |
| | 70 | 2-02 |
| | 73 | 3-11 |
| | 74 | 2-00 |
| | 29 | 0-35 |
| Madavara | 27/1C | 1-10 |
| | 27/1B | 0-21 |
| | 28/1 | 2-13 |
| | 28/2 | 2-39 |
| | 28/3 | 2-18 |
| Totadaguddadahally | 75(P) | 0-09 |
| | 76(P) | 2-20 |
| Total | | 38-00 |

ಮೇಲೆ ಓದಲಾದ ಕ್ರಮ ಸಂಖ್ಯೆ: (3)ರ ಪತ್ರದಲ್ಲಿ NICEL ಸಂಸ್ಥೆಯ ಕಾರ್ಯನಿರ್ವಾಹಕ ನಿರ್ದೇಶಕರ ಪತ್ರಕ್ಕೆ ಲಗತ್ತಿಸಿರುವ ಕರಾರು ಪತ್ರದ ಪ್ರಕಾರ ರೂ. 3,07,97,500 ಮೌಲ್ಯದಲ್ಲಿ 30 ಎಕರೆ ಜಮೀನು ಮಾತ್ರ IMTMA ಗೆ ನೀಡಿರುತ್ತಾರೆ. ವಿವರಗಳು ಈ ಕೆಳಕಂಡಂತಿವೆ.

IMTMA ಸಂಸ್ಥೆಯ ಕೋರಿಕೆಯನ್ನು ಪರಿಶೀಲಿಸಿ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 315 ಮುನೋಮು 2003, ಬೆಂಗಳೂರು, ದಿನಾಂಕ: 3ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಇಂಡಿಯನ್ ಮಷೀನ್ ಟೂಲ್ ಮ್ಯಾನುಫ್ಯಾಕ್ಚರರ್ಸ್ ಅಸೋಸಿಯೇಷನ್, ಬೆಂಗಳೂರು ಸಂಸ್ಥೆಯು ರೂ. 3,07,97,500 ರೂ.ಗಳ ಬೆಲೆಯಲ್ಲಿ ಖರೀದಿಸಲಿರುವ ಈ ಕೆಳಗೆ ಸೂಚಿಸಲಿರುವ 30 ಎಕರೆ ಜಮೀನಿಗೆ ನೋಂದಣಿ ಶುಲ್ಕದಲ್ಲಿ ತಗಲುವ ಮುದ್ರಾಂಕ ಶುಲ್ಕದಲ್ಲಿ ಶೇ. 50 ರಷ್ಟು ವಿನಾಯಿತಿಯನ್ನು ಕರ್ನಾಟಕ ಮುದ್ರಾಂಕ ಕಾಯಿದೆ 1957ರ ಕಲಂ 9-ಎ (1)ರ ಪ್ರಕಾರ ಹಾಗೂ ಪ್ರತಿ ಸಾವಿರ ರೂಪಾಯಿಗಳಿಗೆ ರೂ. 1-00 ರಂತೆ ನೋಂದಣಿ ಶುಲ್ಕದಲ್ಲಿ ವಿನಾಯಿತಿಯನ್ನು ನೋಂದಣಿ ಕಾಯಿದೆ 1908ರ ಕಲಂ 78ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ನೀಡಲಾಗಿದೆ.

| Village:Madavara | | | Boundary | | | |
|---|---|---|---|---|---|---|
| Sl. No. | Sy. No. | Extent<br>Acres Guntas | East | West | North | South |
| 1 | 2 | 3 | 4 | 5 | 6 | 7 |
| 1. | 27/1C Part | 1-10 | 27/1B | Madanayakan halli Village boundary | Madanayakanahalli Village boundary | 27/1C Part |
| 2. | 27/1B Part | 0-21 | 28/3 | 27/1C | Madanayakanahalli Village boundary | 27/1B Part |
| 3. | 28/1 Part | 0-32 | 28/1 Part | 28/2 | Madanayakanahalli Village boundary | 28/1 Part |
| 4. | 28/2 Part | 2-38 | 28/1 | 28/3 | Madanayakanahalli Village boundary | 28/2 Part |
| 5. | 28/3 Part | 2-18 | 28/2 | 27/1B Madanayakanahalli Village boundary | Madanayakanahalli Village boundary | 28/3 Part |
| Madanayakanahalli | | | | | | |
| 6. | 30 Part | 3-0 | Thotadaguddadahalli village boundary | 31 | 70,29,74,73 | Madavara Village Boundary |
| 7. | 30 Part | 3-0 | Thotadaguddadahalli village boundary | 31 | 70,29,74,73 | Madavara Village Boundary |
| 8. | 30 Part | 3-0 | Thotadaguddadahalli village boundary | 31 | 70,29,74,73 | Madavara Village Boundary |
| 9. | 30 Part | 4-0 | Thotadaguddadahalli village boundary | 31 | 70,29,74,73 | Madavara Village Boundary |

| 1 | 2 | 3 | 4 | 5 | 6 | 7 |
|---|---|---|---|---|---|---|
| 10. | 30 Part | 3-0 | Thotadaguddadahalli village boundary | 31 | 70,29,74,73 | Madavara Village Boundary |
| 11. | 70 Part | 0-30 | 29 | 69 | 70 Part | 30 |
| 12. | 73 | 3-11 | Thotadaguddadahalli village boundary | 74 | 72 | 30 |
| 13. | 74 | 2-0 | 73 | 29 | 71.72 | 30 |
| Total | | 30-00 | | | | |

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: 4041/ಎಫ್, ದಿನಾಂಕ: 26.06.2003ರಲ್ಲಿ ನೀಡಿರುವ ಸಹಮತಿಯೊಂದಿಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶೈಲಮ್ಮ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1337 ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

## ENERGY SECRETARIAT

**Sub:** Enhancement from 3.5 MW to 6.00 MW Mini Hydel Power Project near Horiabbe, Varahi river, Kundapur Taluk, Udupi District to M/s S.K. Farms, Limited, Hubli and also permission to implement the Project through M/s Krishna Power Technologies Private Limited.

**Read:**
1) Government Order No. DE 182 NCE 2001 Dated: 19.11.2001.
2) Government Order No. DE 165 NCE 2003 Dated: 10.10.2003.
3) Letter No. KRED/06/Horibbe/2003/901 Dated: 20.06.2003 of the Managing Director, KREDL, Bangalore.
4) Letter No. KRED/06/Horibbe/2003/1559 Dated: 05.10.2003 of the Managing Director, KREDL, Bangalore.

**Preamble:**

In the Government Order Dated: 19.11.2001 cited (1) above, Government have allotted 3.5 MW capacity Mini Hydel Project near Horibbe, Varahi river, Kundapur Taluk, Udupi District.

2. In the Government Order Dated: 10.10.2003 cited (2) above, Government after detailed careful consideration have restored the said Project to M/s S.K. Farms, Hubli.

3. The Managing Director, Karnataka Renewable Energy Development Limited in his letter Dated: 20.06.2003 cited (3) above has intimated that, the said developer after detailed survey of the area, submitted a detailed project to enhance the capacity from 3.50 MW to 6.00 MW. He has therefore, requested the Government for taking suitable action in this regard.

4. Further, the Managing Director, Karnataka Renewable Energy Development Limited in his letter Dated: 05.10.2003 cited (4) above, has reported that M/s S.K. Farms, Hubli based on the Government Order Dated: 19.11.2001, signed the agreement with the Government on 06.06.2002. He has further recommended to implement the Mini Hydel Project allocated to M/s S.K. Farms, Hubli through M/s Krishna Power Technologies Private Limited and has sought order of the Government in this regard.

5. The Government have examined the proposal in detail. Hence, the following order.

**Government Order No. DE 165 NCE 2003, Bangalore, Dated: 15th October, 2003**

In the circumstances explained in the preamble, Government are pleased to enhance the capacity from 3.5 MW Mini Hydel Project near Horiabbe, Varahi river, Kundapur Taluk, Udupi District allocated to M/s S.K. Farms, Hubli to 6.00 MW Further, Government are pleased to convey the approval to implement the said project through M/s Krishna Power Technologies Private Limited.

By Order and in the Name of the Governor of Karnataka,

**K.L. JAYARAM**

Under Secretary to Government,

PR-1338 Energy Department.

## ಲೋಕೋಪಯೋಗಿ ಸಚಿವಾಲಯ

**ವಿಷಯ:** ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ Inland Water Transport Engineer ಮತ್ತು ಕಿರಿಯ ಇಂಜಿನಿಯರ್ (ಲೋಕೋಪಯೋಗಿ ಇಲಾಖೆಯ ಸಹಾಯಕ ಇಂಜಿನಿಯರ್ ಹುದ್ದೆಯ ಸಮಾನಾಂತರ ವೇತನ ಶ್ರೇಣಿ ಹೊಂದಿರುವ) ಹುದ್ದೆಗಳನ್ನು ಪುನರ್‌ಪದನಾಮೀಕರಣ ಮಾಡುವ ಬಗ್ಗೆ.

**ಓದಲಾಗಿದೆ:**
1) ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ನಿರ್ದೇಶಕರ ದಿನಾಂಕ: 13.02.2001ರ ಪತ್ರ ಸಂಖ್ಯೆ: ಬಂಒಜಸಾ-74:ಸಿಬ್ಬಂದಿ:1:2000.
2) ದಿನಾಂಕ: 01.08.96ರ ಸರ್ಕಾರದ ಅಧಿಕೃತ ಜ್ಞಾಪನಾ ಸಂಖ್ಯೆ: ಸಿಆಸುಇ 38 ಸೇನಿಇ 96.

3) ದಿನಾಂಕ: 27.08.98ರ ಆದೇಶ ಸಂಖ್ಯೆ: ಎಫ್‌ಡಿ 18 ಎಸ್‌ಆರ್‌ಪಿ 98.
4) ದಿನಾಂಕ: 05.12.98ರ ಆದೇಶ ಸಂಖ್ಯೆ: ಲೋಇ 478 ಸೇಸಎ 98.
5) ದಿನಾಂಕ: 26.07.99ರ ಆದೇಶ ಸಂಖ್ಯೆ: ಲೋಇ 390 ಸೇಸಎ 99.
6) ದಿನಾಂಕ: 16.04.2001ರ ಆದೇಶ ಸಂಖ್ಯೆ: ನೀಇ 168 ಸೇಸಎ 2000.
7) ದಿನಾಂಕ: 06.06.2001ರ ಆದೇಶ ಸಂಖ್ಯೆ: ಲೋಇ 205 ಸೇಸಎ 2001.

**ಪ್ರಸ್ತಾವನೆ:**

ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ಮಂಜೂರಾದ ಒಳನಾಡು ಜಲಸಾರಿಗೆ ಅಭಿಯಂತರ (Inland Water Transport Engineer) ಒಂದು ಹುದ್ದೆ ಪ್ರಸ್ತುತ ಖಾಲಿ ಇರುತ್ತದೆ. ಸದರಿ ಹುದ್ದೆಯು ಗ್ರೂಪ್-ಎ ವೇತನ ಶ್ರೇಣಿ ರೂ 7400-13120 ಹೊಂದಿರುತ್ತದೆ. ಚಾಲ್ತಿಯಲ್ಲಿರುವ ವೃಂದ ಮತ್ತು ನೇಮಕಾತಿ ನಿಯಮಗಳನ್ವಯ ಸದರಿ ಹುದ್ದೆಯು ಇಲಾಖೆಯ ಅರ್ಹ ಕಿರಿಯ ಅಭಿಯಂತರ (ಸಹಾಯಕ ಇಂಜಿನಿಯರ್) ಸಿಬ್ಬಂದಿಗೆ ಮುಂಬಡ್ತಿ ನೀಡಿ ತುಂಬಬಹುದಾಗಿದೆ. ಆದರೆ, ಮುಂಬಡ್ತಿ ಹೊಂದಬೇಕಾದ ಅಭ್ಯರ್ಥಿ ಲಭ್ಯವಿಲ್ಲದಿದ್ದಲ್ಲಿ ಈ ಹುದ್ದೆಯನ್ನು ನೇರ ನೇಮಕಾತಿಯಿಂದ ತುಂಬಬಹುದಾಗಿರುತ್ತದೆ.

ಪ್ರಸ್ತುತ ಇಲಾಖೆಯಲ್ಲಿ 4 ಮಂದಿ ಕಿರಿಯ ಇಂಜಿನಿಯರ್‌ಗಳು (ಲೋಕೋಪಯೋಗಿ ಇಲಾಖೆಯ ಸಹಾಯಕ ಇಂಜಿನಿಯರ್ ಹುದ್ದೆಗೆ ಸಮಾನಾಂತರ ಎಂದು ಪರಿಗಣಿಸಲ್ಪಟ್ಟ) ಇದ್ದು ಇವರು ಒಳನಾಡು ಜಲಸಾರಿಗೆ ಇಲಾಖೆ ಅಭಿಯಂತರರ ಹುದ್ದೆಗೆ ಬಡ್ತಿ ಹೊಂದಲು ಅರ್ಹರಿರುತ್ತಾರೆ. ವಿನತ್ಮಧ್ಯೆ ಕ್ರಮ ಸಂಖ್ಯೆ: 4 ರಿಂದ 7ರಲ್ಲಿ ಓದಲಾದ ಆದೇಶಗಳಲ್ಲಿ ಲೋಕೋಪಯೋಗಿ ಮತ್ತು ನೀರಾವರಿ ಇಲಾಖೆಯ ಕೆಲವು ಉಪ ವಿಭಾಗಗಳನ್ನು ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ಆಡಳಿತಾತ್ಮಕ ಕಾರಣದಿಂದ ವರ್ಗಾಯಿಸಲಾಗಿದೆ. ಸದರಿ 4 ಉಪ-ವಿಭಾಗಗಳಲ್ಲಿ ಒಂದೊಂದು ಸಹಾಯಕ ಇಂಜಿನಿಯರ್ ಹುದ್ದೆಗಳಿದ್ದು ಈ ಹುದ್ದೆಗಳು ಒಳನಾಡು ಜಲಸಾರಿಗೆ ಅಭಿಯಂತರರ ವೇತನ ಶ್ರೇಣಿಯನ್ನೇ ಹೊಂದಿರುತ್ತದೆ. ಆದ ಕಾರಣ ಈ 4 ಹುದ್ದೆಗಳೂ ಸೇರಿ ಇಲಾಖೆಯಲ್ಲಿ ರೂ. 7400-13120 ವೇತನ ಶ್ರೇಣಿಯಲ್ಲಿರುವ ಒಳನಾಡು ಜಲಸಾರಿಗೆ ಅಭಿಯಂತರರ ಹುದ್ದೆಗೆ ಸಮಾನವಾದ 5 ಹುದ್ದೆಗಳಿವೆ. ಇದಲ್ಲದೇ ಇಲಾಖೆಯಲ್ಲಿರುವ ಕಿರಿಯ ಇಂಜಿನಿಯರ್ ಹುದ್ದೆಗಳಿಗೆ ದಿನಾಂಕ: 27.08.97ರ ಆದೇಶ ಸಂಖ್ಯೆ: ಎಫ್‌ಡಿ 18 ಎಸ್‌ಆರ್‌ಪಿ 97 ರಲ್ಲಿ ವೇತನ ಶ್ರೇಣಿ ರೂ. 2050-3950ಅನ್ನು ನೀಡಿದ್ದು (ಪ್ರಸ್ತುತ ರೂ. 6000-11200) ಇದು ಲೋಕೋಪಯೋಗಿ ಇಲಾಖೆಯ ಸಹಾಯಕ ಇಂಜಿನಿಯರ್ ಹುದ್ದೆಗೆ ಸಮಾನಾಂತರವಾಗಿರುತ್ತದೆ. ಆದರೆ, ಪ್ರಸ್ತುತ ಈ ಕಿರಿಯ ಇಂಜಿನಿಯರ್ ಹುದ್ದೆಗೆದುರಾಗಿ ಕಾರ್ಯನಿರ್ವಹಿಸುತ್ತಿರುವ ಇಲಾಖೆಯ ನೌಕರರು ಡಿಪ್ಲೋಮಾ ಇನ್ ಸಿವಿಲ್ ಅಥವಾ ಮೆಕ್ಯಾನಿಕಲ್ ವಿದ್ಯಾರ್ಹತೆಯನ್ನು ಹೊಂದಿದ್ದು ಅವರುಗಳನ್ನು ಲೋಕೋಪಯೋಗಿ ಇಲಾಖೆಯಲ್ಲಿನ ಡಿಪ್ಲೋಮದಾರರಿಗೆ ಮಾತ್ರ ಹೋಲಿಸಬೇಕಾಗುತ್ತದೆ. ಲೋಕೋಪಯೋಗಿ ಇಲಾಖೆಯಲ್ಲಿ ಸಹಾಯಕ ಇಂಜಿನಿಯರ್ ಹುದ್ದೆಗಳನ್ನು ಪದವೀಧರ ಇಂಜಿನಿಯರುಗಳನ್ನು ನೇರ ನೇಮಕಾತಿಯಿಂದ ತುಂಬಲಾಗುತ್ತಿದೆ. ಡಿಪ್ಲೋಮಾ ಇಂಜಿನಿಯರ್ (ಸಿವಿಲ್:ಮೆಕ್ಯಾನಿಕಲ್) ಹೊಂದಿರುವವರೆಗೆ ಕಿರಿಯ ಇಂಜಿನಿಯರ್ ಹುದ್ದೆಯಲ್ಲಿ ನೇರ ನೇಮಕಾತಿಗೆ ಅವಕಾಶವಿದ್ದು ಡಿಪ್ಲೋಮಾದಾರರಿಗೆ ಅವರದ್ದೇ ಆದ ಬಡ್ತಿಯ ಅವಕಾಶ ಕಲ್ಪಿಸಲಾಗಿದೆ. ಲೋಕೋಪಯೋಗಿ ಇಲಾಖೆಯಲ್ಲಿನ ಅರ್ಹ ಕಿರಿಯ ಇಂಜಿನಿಯರ್‌ಗಳಿಗೆ, ಪದವೀಧರ ಸಹಾಯಕ ಇಂಜಿನಿಯರ್‌ಗಳಿಗೆ ಸಮಾನಾಂತರವಾದ ಹಾಗೂ ವೇತನ ಶ್ರೇಣಿ ರೂ. 6000-11200 ಹೊಂದಿರುವ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಹುದ್ದೆಗೆ ಬಡ್ತಿ ನೀಡಲಾಗುತ್ತಿದೆ. ತದನಂತರ ಈ ವೃಂದದಲ್ಲಿರುವ ಅಧಿಕಾರಿಗಳಿಗೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ವಿಭಾಗ-2) ಹುದ್ದೆಗೆ ಬಡ್ತಿ ನೀಡಲು ಅವಕಾಶ ಕಲ್ಪಿಸಲಾಗಿದೆ.

ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯು ಲೋಕೋಪಯೋಗಿ ಸಚಿವಾಲಯದ ಆಡಳಿತ ಪರಿಧಿಗೆ ಬರುವುದರಿಂದ ಹಾಗೂ ಇಲಾಖೆಯಲ್ಲಿ ಪ್ರಸ್ತುತ ಇರುವ ಒಳನಾಡು ಜಲಸಾರಿಗೆ ಅಭಿಯಂತರರ ಹುದ್ದೆಯು ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಸಮಾನಾಂತರವಾದ ವೇತನ ಶ್ರೇಣಿ ಹೊಂದಿರುವುದರಿಂದ ಮತ್ತು ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಕಿರಿಯ ಇಂಜಿನಿಯರ್ (ಸಹಾಯಕ ಇಂಜಿನಿಯರ್ ಎಂದು ಪರಿಗಣಿಸಲ್ಪಟ್ಟ) ಹುದ್ದೆಯು ಲೋಕೋಪಯೋಗಿ ಇಲಾಖೆಯಲ್ಲಿನ ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ) ಹುದ್ದೆಗೆ ಸಮಾನಾಂತರವಾಗಿರುವುದರಿಂದ ಮೇಲ್ಕಂಡ ಹುದ್ದೆಗಳ ಪದನಾಮವನ್ನು ಬದಲಾಯಿಸುವುದು ಆಡಳಿತಾತ್ಮಕವಾಗಿ ಅಗತ್ಯವೆಂದು ತೀರ್ಮಾನಿಸಿದೆ. ಅಂತೆಯೇ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 3 ಬನೌಸೇ 2000(1), ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್, 2003**

ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ವೇತನ ಶ್ರೇಣಿ ರೂ. 7400-13120 ಅನ್ನು ಹೊಂದಿರುವ ಒಳನಾಡು ಜಲಸಾರಿಗೆ ಅಭಿಯಂತರರ (Inland Water Transport Engineer) ಹುದ್ದೆಯನ್ನು ಕೂಡಲೇ ಜಾರಿಗೆ ಬರುವಂತೆ "ಸಹಾಯಕ ಕಾರ್ಯಪಾಲಕ ಇಂಜಿನಿಯರ್" ಎಂದು ಮರು ಪದನಾಮೀಕರಿಸಲಾಗಿದೆ ಹಾಗೂ ಇಲಾಖೆಯಲ್ಲಿ ಪ್ರಸ್ತುತ ಲೋಕೋಪಯೋಗಿ ಹಾಗೂ ನೀರಾವರಿ ಇಲಾಖೆಯಿಂದ ವರ್ಗಾಯಿಸಲ್ಪಟ್ಟ 4 "ಸಹಾಯಕ ಕಾರ್ಯಪಾಲಕ ಇಂಜಿನಿಯರ್" ಹುದ್ದೆಗಳಿಗೆ ತತ್ಸಮಾನ ಎಂದು ಪರಿಗಣಿಸಲಾಗಿದೆ. ಇನ್ನು ಮುಂದೆ ಈ ಎಲ್ಲಾ 5 ಹುದ್ದೆಗಳನ್ನು "ಸಹಾಯಕ ಕಾರ್ಯಪಾಲಕ ಇಂಜಿನಿಯರ್" ಹುದ್ದೆಗಳೆಂದು ಪದನಾಮದಿಂದ ಕರೆಯತಕ್ಕದ್ದು.

ಅಂತೆಯೇ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿನ ಕಿರಿಯ ಇಂಜಿನಿಯರ್ ಹುದ್ದೆಯು ದಿನಾಂಕ: 27.08.97ರ ಆದೇಶ ಸಂಖ್ಯೆ:ಎಫ್‌ಡಿ 18 ಎಸ್‌ಆರ್‌ಪಿ 97ರಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿನ ಪದವೀಧರ ಸಹಾಯಕ ಇಂಜಿನಿಯರ್ ಹುದ್ದೆಗೆ ತತ್ಸಮಾನ ವೇತನ ಶ್ರೇಣಿಯನ್ನು ಹೊಂದಿದ್ದರೂ ಸಹ ಲೋಕೋಪಯೋಗಿ ಇಲಾಖೆಯಲ್ಲಿ ಡಿಪ್ಲೋಮಾದಾರರಿಗೆ ಅವರದ್ದೇ ಆದ ಬಡ್ತಿ ಅವಕಾಶ ಕಲ್ಪಿಸಿರುವುದನ್ನು ಮನಗಂಡು ಹಾಗೂ ಲೋಕೋಪಯೋಗಿ ಇಲಾಖೆಯಲ್ಲಿ ಸಹಾಯಕ ಇಂಜಿನಿಯರ್ ವೇತನ ಶ್ರೇಣಿ ರೂ. 6000-11200 ಹೊಂದಿರುವ ಡಿಪ್ಲೋಮದಾರರಿಗೆ 'ಕಿರಿಯ ಇಂಜಿನಿಯರ್ (ವಿಶೇಷದರ್ಜೆ)' ಎಂಬ ಪದನಾಮವನ್ನು ನೀಡಿರುವುದರಿಂದ

ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯು ಲೋಕೋಪಯೋಗಿ ಸಚಿವಾಲಯದ ಆಡಳಿತ ಪರಿಧಿಗೆ ಬಂದಿರುವುದರಿಂದ ಈ ವಿಷಯದಲ್ಲಿ ಎರಡು ಇಲಾಖೆಗಳಲ್ಲಿ ಒಂದೇ ರೀತಿಯ ಪದನಾಮವಿರುವ ಹುದ್ದೆಗಳಿರುವುದು ಅವಶ್ಯವೆಂದು ಪರಿಗಣಿಸಿ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಪ್ರಸ್ತುತ ರೂ. 6000-11200 ವೇತನ ಶ್ರೇಣಿ ಹೊಂದಿರುವ "ಕಿರಿಯ ಇಂಜಿನಿಯರ್" ಹುದ್ದೆಗಳನ್ನು "ಕಿರಿಯ ಇಂಜಿನಿಯರ್ (ವಿಶೇಷ ದರ್ಜೆ)" ಎಂದು ಪುನರ್ ಪದನಾಮೀಕರಿಸಲಾಗಿದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಿಆಸುಇ 99 ಸೇನಿಡಿ 2001, ದಿನಾಂಕ: 11.12.2002 ಹಾಗೂ ಆರ್ಥಿಕ ಇಲಾಖೆಯ (ಆರ್ಥಿಕ ಕೋಶ) ಟಿಪ್ಪಣಿ ಸಂಖ್ಯೆ: ಲೋಇ 317 ಆಕೋ-3:2003 ದಿನಾಂಕ: 02.08.2003ರಲ್ಲಿ ನೀಡಿರುವ ಅಭಿಪ್ರಾಯ: ಸಹಮತಿಯನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ವೈ. ಸಾಗರ್**

ಪೀಠಾಧಿಕಾರಿ-2,

ಪಿ.ಆರ್. 1339 ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

**ವಿಷಯ:** ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ವರ್ಗಾವಣೆಗೊಂಡಿರುವ ಹಂಗಾಮಿ ಹುದ್ದೆಗಳನ್ನು ಖಾಯಂಗೊಳಿಸುವ ಬಗ್ಗೆ-ಆದೇಶ.

**ಓದಲಾಗಿದೆ:**
1) ಸರ್ಕಾರದ ಆದೇಶ ಸಂಖ್ಯೆ: ಲೋಇ 478 ಸೇಸಎ 98 ದಿನಾಂಕ: 05.12.98.
2) ಸರ್ಕಾರದ ಆದೇಶ ಸಂಖ್ಯೆ: ಲೋಇ 478 ಸೇಸಎ 98 ದಿನಾಂಕ: 01.07.99.
3) ಸರ್ಕಾರದ ಆದೇಶ ಸಂಖ್ಯೆ: ಲೋಇ 29 ಸೇಸಎ 98 ದಿನಾಂಕ: 23.02.98
4) ಸರ್ಕಾರದ ಆದೇಶ ಸಂಖ್ಯೆ: ಲೋಇ 390 ಸೇಸಎ 99 ದಿನಾಂಕ:26.07.99
5) ಸರ್ಕಾರದ ಆದೇಶ ಸಂಖ್ಯೆ: ಲೋಇ 622 ಸೇಸಎ 99 ದಿನಾಂಕ:21.08.99
6) ಸರ್ಕಾರದ ಆದೇಶ ಸಂಖ್ಯೆ: ನೀಇ 168 ಸೇಸಎ 2000 ದಿನಾಂಕ:16.04.2001.
7) ಸರ್ಕಾರದ ಆದೇಶ ಸಂಖ್ಯೆ: ಲೋಇ 148 ಸೇಸಎ 98(ಭಾಗ) ದಿನಾಂಕ:23.04.99.
8) ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ, ಕಾರವಾರ ಕಛೇರಿಯ ಪತ್ರ ಸಂಖ್ಯೆ:ಬಂಒಜಸಾ 28 ಸಿಬ್ಬಂದಿ:1:2002 ದಿನಾಂಕ: 18.03.2002.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ: (1)ರಿಂದ (7)ರವರೆಗೆ ಓದಲಾದ ಸರ್ಕಾರದ ಆದೇಶಗಳಲ್ಲಿ ಕೆಳಕಂಡ ಹಂಗಾಮಿ ಕಛೇರಿಗಳನ್ನು ಹಾಗೂ ಅವುಗಳಿಗೆ ಹೊಂದಿಕೊಂಡ ತಾತ್ಕಾಲಿಕ ಹುದ್ದೆಗಳನ್ನು (ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹುದ್ದೆಗೆ ಸೀಮಿತಗೊಂಡಂತೆ) ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ವರ್ಗಾಯಿಸಲಾಗಿದೆ. ಈ ಹುದ್ದೆಗಳ ಸಂಪೂರ್ಣ ವಿವರಗಳನ್ನು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ನೀಡಿದೆ.

ಸದರಿ ಹುದ್ದೆಗಳಲ್ಲಿ ಕೆಲವನ್ನು ಮಾತ್ರ ಖಾಯಂಗೊಳಿಸಿ ಆದೇಶವನ್ನು ಹೊರಡಿಸಿದ್ದರೂ ಸಹ ಕೆಲವೊಂದು ತಾತ್ಕಾಲಿಕ ಹುದ್ದೆಗಳು ವರ್ಗಾಯಿಸಲಾದ ದಿನಾಂಕದಿಂದ ಕಾರ್ಯನಿರ್ವಹಿಸುತ್ತಿದ್ದು ಅಂದಿನಿಂದ ಪ್ರತಿ ವರ್ಷ ಮುಂದುವರೆಸುವ ಆದೇಶಗಳನ್ನು ಪಡೆಯುತ್ತಾ ಬಂದಿದ್ದು ತಾತ್ಕಾಲಿಕ ಹುದ್ದೆಯಲ್ಲಿಯೇ ಮುಂದುವರೆಸಲಾಗಿದೆ. ಆದಾಗ್ಯೂ ಈ ಎಲ್ಲಾ ಹುದ್ದೆಗಳೂ ಪ್ರಸ್ತುತ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಹುದ್ದೆಗಳಾಗಿ ಸ್ಥಳಾಂತರಗೊಂಡಿರುವುದರಿಂದ ಅವುಗಳ ಈಗಿನ ಸ್ವರೂಪ ಹಾಗೂ ಅಸ್ತಿತ್ವವನ್ನು ಪುನರ್‌ವಿಮರ್ಶಿಸಿ ಆದೇಶ ಹೊರಡಿಸುವ ಪ್ರಮೇಯವಿದೆ.

ಮೇಲ್ಕಂಡ ವಿಭಾಗಗಳು ಹಾಗೂ ಉಪ-ವಿಭಾಗಗಳು ಬೇರೆ ಇಲಾಖೆಗಳಿಂದ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಗೆ ಸಂಬಂಧಿಸಿದ ಬಂದರು ಕಾಮಗಾರಿಗಳ:ಸಮುದ್ರ ಕೊರೆತ ನಿರೋಧಕ ಸಮುದ್ರ ತಟ ರಕ್ಷಣೆ ಕಾಮಗಾರಿಗಳು ಹಾಗೂ ಬಂದರು ಇಲಾಖೆಯ ಮೀನುಗಾರಿಕೆ ಇಲಾಖೆಯ ಪರವಾಗಿ ನಿರ್ವಹಿಸುವ ಮೀನುಗಾರಿಕೆ ಬಂದರುಗಳ ಕಾಮಗಾರಿಗಳನ್ನು ನಿರ್ವಹಿಸಲು ಬಂದರು ಇಲಾಖೆಗೆ ಅತೀ ಅವಶ್ಯಕವಾದ ಕಛೇರಿಗಳಾಗಿರುತ್ತವೆ.

ಮೇಲೆ (8)ರಲ್ಲಿ ಓದಲಾದ ದಿನಾಂಕ: 18.03.2002ರ ಪತ್ರದಲ್ಲಿ ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ, ಕಾರವಾರವು ಪ್ರಸ್ತಾವನೆ ಸಲ್ಲಿಸಿ ಮೇಲ್ಕಂಡ ಹಂಗಾಮಿ ಕಛೇರಿ ಹಾಗೂ ಹುದ್ದೆಗಳನ್ನು ಖಾಯಂಗೊಳಿಸುವಂತೆ ಕೋರಿರುತ್ತಾರೆ. ಸರ್ಕಾರವು ನಿರ್ದೇಶಕರು, ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ಹೊರಡಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲೋಇ 3 ಬನೌಸೇ 2000, ಬೆಂಗಳೂರು, ದಿನಾಂಕ: 10ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವಂತೆ ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯಲ್ಲಿ ಕೆಳಕಂಡ ಕಛೇರಿಗಳು ಹಾಗೂ ಅವುಗಳಿಗೆ ಹೊಂದಿಕೊಂಡ ಹಂಗಾಮಿ ಹುದ್ದೆಗಳನ್ನು ಅನುಬಂಧದಲ್ಲಿ ವಿವರಿಸಿರುವಂತೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಖಾಯಂಗೊಳಿಸಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಇನ್ನು ಮುಂದೆ ಸದರಿ ಹುದ್ದೆಗಳು ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಖಾಯಂ ಹುದ್ದೆಗಳೆಂದು ಪರಿಗಣಿಸಲ್ಪಡುತ್ತದೆ.

1. ಬಂದರು ಉಪ-ವಿಭಾಗ ಕಛೇರಿ, ಹೊನ್ನಾವರ.
2. ಬಂದರು ಮತ್ತು ಮೀನುಗಾರಿಕಾ ಉಪ-ವಿಭಾಗ ಕಛೇರಿ, ಉಡುಪಿ.

3. ಬಂದರು ಮತ್ತು ಮೀನುಗಾರಿಕಾ ಉಪ-ವಿಭಾಗ ಕಛೇರಿ, ಮಂಗಳೂರು.
4. ನಂ.1 ಬಂದರು ಉಪ-ವಿಭಾಗ ಕಛೇರಿ, ಕಾರವಾರ.

ಇಲಾಖೆಯ ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಈ ಖಾಯಂ ಹುದ್ದೆಗಳನ್ನು ಸೇರಿಸಿ ಸೂಕ್ತ ತಿದ್ದುಪಡಿಯನ್ನು ಪ್ರತ್ಯೇಕವಾಗಿ ಹೊರಡಿಸಲಾಗುವುದು.

ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ:58:ಎಸ್‌ಆರ್‌ಎಸ್ 79 ದಿನಾಂಕ: 27.09.1979ರಲ್ಲಿ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್.ವೈ. ಸಾಗರ್**
ಪೀಠಾಧಿಕಾರಿ-2,
ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

**ಅನುಬಂಧ**

**1) ಸರ್ಕಾರದ ಆದೇಶ ಸಂಖ್ಯೆ: ಲೋಇ 478 ಸೇಸಎ 98, ದಿನಾಂಕ: 5.12.98.**

ರಾಷ್ಟ್ರೀಯ ಕ್ರೀಡೆಗಳ ವಿಭಾಗ (ವಿದ್ಯುತ್), ಬೆಂಗಳೂರು ಇಂದ ಬಂದರು ಉಪ-ವಿಭಾಗ ಕಛೇರಿ, ಕುಮುಟಗೆ ವರ್ಗಾವಣೆ ಮಾಡಿ ನಂತರ ಸರ್ಕಾರದ ಆದೇಶ ಸಂಖ್ಯೆ: ಲೋಇ 478:ಸೇಸಎ:98 ದಿನಾಂಕ:01.07.99ರ ಆದೇಶದಲ್ಲಿ ಬಂದರು ಉಪ-ವಿಭಾಗ ಕಛೇರಿ, ಕುಮಟದಲ್ಲಿನ ಹುದ್ದೆಗಳನ್ನು ಹೊನ್ನಾವರ ಬಂದರು ಉಪ-ವಿಭಾಗ ಕಛೇರಿಗೆ ವರ್ಗಾಯಿಸಲಾಗಿದೆ.

| ಹುದ್ದೆಗಳ ವಿವರ | | ಹುದ್ದೆಗಳ ಸಂಖ್ಯೆ |
|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 1 |
| 2. | ಸಹಾಯಕ ಇಂಜಿನಿಯರ್ | 2 |
| 3. | ಕಿರಿಯ ಇಂಜಿನಿಯರ್ | 2 |
| 4. | ಪ್ರಥಮ ದರ್ಜೆ ಸಹಾಯಕ | 1 |
| 5. | ದ್ವಿತೀಯ ದರ್ಜೆ ಸಹಾಯಕ | 1 |
| 6. | ಜವಾನರು | 2 |

**2) ಸರ್ಕಾರದ ಆದೇಶ ಸಂಖ್ಯೆ: ಲೋಇ 29 ಸೇಸಎ 98 ದಿನಾಂಕ: 23.02.98**

ಲೋಇ ಬಂದರು ಉಪ-ವಿಭಾಗ, ಮಂಗಳೂರು ಕಛೇರಿಯನ್ನು ಬಂದರು ಮತ್ತು ಮೀನುಗಾರಿಕೆ ಉಪ-ವಿಭಾಗ, ಉಡುಪಿಯನ್ನಾಗಿ ಪರಿವರ್ತಿಸಿ ಸಿಬ್ಬಂದಿ ಸಹಿತ ದಿನಾಂಕ: 01.04.1998 ರಿಂದ ಜಾರಿಗೆ ಬರುವಂತೆ ಸ್ಥಳಾಂತರಿಸಲಾಗಿದೆ. ನಂತರ ಸದರಿ ಉಡುಪಿ-ಉಪವಿಭಾಗ ಕಛೇರಿಯನ್ನು ಸರ್ಕಾರದ ಆದೇಶ ಸಂಖ್ಯೆ: ಲೋಇ 390 ಸೇಸಎ 99 ದಿನಾಂಕ: 26.07.99ರಲ್ಲಿ ದಿನಾಂಕ:01.04.99 ರಿಂದ 31.03.2000 ರವರೆಗೆ ಮುಂದುವರೆಸಲು ಸರ್ಕಾರದ ಮಂಜೂರಾತಿಯನ್ನು ನೀಡಿದೆ. ನಂತರ ಸರ್ಕಾರದ ಆದೇಶ ಸಂಖ್ಯೆ: ಲೋಇ 90 ಸೇಸಎ 99 ದಿನಾಂಕ: 26.07.99ರ ಅನುಬಂಧ-1ರ ಕ್ರಮ ಸಂಖ್ಯೆ: 44ರ ಕಲಂ 2ಕ್ಕೆ ತಿದ್ದುಪಡಿ ಮಾಡಿ ಸರ್ಕಾರದ ಆದೇಶ ಸಂಖ್ಯೆ: ಲೋಇ 622:ಸೇಸಎ:99 ದಿನಾಂಕ: 21.08.99ರಲ್ಲಿ ಆದೇಶ ಹೊರಡಿಸಿದೆ.

| | | |
|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 1 ಹುದ್ದೆ |
| 2. | ಸಹಾಯಕ ಇಂಜಿನಿಯರ್ | 3 ಹುದ್ದೆಗಳು |
| 3. | ಕಿರಿಯ ಇಂಜಿನಿಯರ್ | 3 ಹುದ್ದೆಗಳು |
| 4. | ಆಕೃತಿ ರಚನಾಕಾರರು | 1 ಹುದ್ದೆ |
| 5. | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 6. | ದ್ವಿತೀಯ ದರ್ಜೆ ಸಹಾಯಕರು | 2 ಹುದ್ದೆಗಳು |
| 7. | ಬೆರಳಚ್ಚುಗಾರರು | 1 ಹುದ್ದೆ |
| 8. | ಜವಾನರು | 2 ಹುದ್ದೆಗಳು |

**3) ಸರ್ಕಾರದ ಆದೇಶ ಸಂಖ್ಯೆ: ನೀಇ 168 ಸೇಸನಿ 2000, ದಿನಾಂಕ: 16.04.2001**

ನೀರಾವರಿ ಇಲಾಖೆಯಲ್ಲಿನ ಕೃಷ್ಣಭಾಗ್ಯ ಜಲನಿಗಮ ನಿಯಮಿತ ಅಡಿಯಲ್ಲಿ ಹೆಚ್ಚುವರಿಯಾಗಿರುವ ನಂ. 19 ಐಬಿಸಿ ಉಪ-ವಿಭಾಗ, ಕೃಷ್ಣಾಪುರ ಕಛೇರಿಯನ್ನು ಕೆಳಕಂಡ ಹುದ್ದೆಗಳ ಸಮೇತ ಕೂಡಲೇ ಜಾರಿಗೆ ಬರುವಂತೆ ಲೋಕೋಪಯೋಗಿ ಇಲಾಖೆಯ ಅಧೀನದ ಬಂದರು ಮತ್ತು ಮೀನುಗಾರಿಕೆ ಉಪ-ವಿಭಾಗ ಮಂಗಳೂರು ಇಲ್ಲಿಗೆ ವರ್ಗಾಯಿಸಲಾಗಿದೆ.

| | | |
|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 1 ಹುದ್ದೆ |
| 2. | ಸಹಾಯಕ ಇಂಜಿನಿಯರ್ | 3 ಹುದ್ದೆಗಳು |
| 3. | ಕಿರಿಯ ಇಂಜಿನಿಯರ್ | 3 ಹುದ್ದೆಗಳು |
| 4. | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 5. | ದ್ವಿತೀಯ ದರ್ಜೆ ಸಹಾಯಕರು | 2 ಹುದ್ದೆಗಳು |

| | | |
|---|---|---|
| 6. | ಬೆರಳಚ್ಚುಗಾರರು | 1 ಹುದ್ದೆ |
| 7. | ವಾಹನ ಚಾಲಕ | 1 ಹುದ್ದೆ |
| 8. | ಜವಾನರು | 1 ಹುದ್ದೆ |
| 9. | ಕಾವಲುಗಾರ | 1 ಹುದ್ದೆ |
| 10. | ಸ್ವೀಪರ್ | 1 ಹುದ್ದೆ |

**4) ಸರ್ಕಾರದ ಆದೇಶ ಸಂಖ್ಯೆ: ಲೋಇ 148 ಸೇಸಎ 98(ಭಾಗ) ದಿನಾಂಕ: 23.04.99**

ಸರ್ಕಾರದ ಆದೇಶ ಸಂಖ್ಯೆ: ಲೋಇ 305 ಸೇಸಎ 98 ದಿನಾಂಕ: 18.08.98 ಮತ್ತು ಸೇರ್ಪಡೆ ಆದೇಶ ದಿನಾಂಕ: 08.10.98ರಲ್ಲಿ ಸ್ಥಳಾಂತರಗೊಂಡು ನಂ.1 ಬಂದರು ಉಪ-ವಿಭಾಗ, ಕಾರವಾರ ಕಛೇರಿಯನ್ನು ಸರ್ಕಾರದ ಆದೇಶ ಸಂಖ್ಯೆ: ಲೋಇ 148 ಸೇಸಎ 98 (ಭಾಗ) ದಿನಾಂಕ: 23.04.99ರಲ್ಲಿ ಕೆಳಕಂಡ ಹುದ್ದೆಗಳನ್ನು ಖಾಯಂಗೊಳಿಸಿ ಸರ್ಕಾರದ ಮಂಜೂರಾತಿಯನ್ನು ನೀಡಲಾಗಿದೆ. ಸದರಿ ಖಾಯಂಗೊಂಡ ಹುದ್ದೆಗಳನ್ನು ಬಂದರು ಮತ್ತು ಒಳನಾಡು ಜಲಸಾರಿಗೆ ಇಲಾಖೆಯ ಶಾಶ್ವತ ಹುದ್ದೆಗಳನ್ನು ಪರಿಗಣಿಸಬಹುದಾಗಿದೆ.

| | | |
|---|---|---|
| 1. | ಸಹಾಯಕ ಕಾರ್ಯಪಾಲಕ ಇಂಜಿನಿಯರ್ | 1 ಹುದ್ದೆ |
| 2. | ಸಹಾಯಕ ಇಂಜಿನಿಯರ್ | 3 ಹುದ್ದೆಗಳು |
| 3. | ಕಿರಿಯ ಇಂಜಿನಿಯರ್ | 2 ಹುದ್ದೆಗಳು |
| 4. | ಪ್ರಥಮ ದರ್ಜೆ ಸಹಾಯಕರು | 1 ಹುದ್ದೆ |
| 5. | ದ್ವಿತೀಯ ದರ್ಜೆ ಸಹಾಯಕರು | 1 ಹುದ್ದೆ |
| 6. | ಆಕೃತಿ ರಚನಾಕಾರರು | 1 ಹುದ್ದೆ |
| 7. | ಜವಾನ (ಪ್ಯೂನ್) | 1 ಹುದ್ದೆ |

**ಎನ್.ವೈ. ಸಾಗರ್**
ಪೀಠಾಧಿಕಾರಿ-2,
ಲೋಕೋಪಯೋಗಿ ಇಲಾಖೆ (ಸೇವೆಗಳು-ಸಿ).

ಪಿ.ಆರ್. 1340

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ:** ಡಾ: ಎಸ್.ಜಿ. ಜಯರಾಜ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಹರಿಹರ ಇವರು ಸರ್ಕಾರಿ ಸೇವೆಗೆ ಅನಧಿಕೃತ ಗೈರುಹಾಜರಿ ಆರೋಪಕ್ಕೆ ಸಂಬಂಧಿಸಿದಂತೆ ಇವರನ್ನು ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸುವ ಆದೇಶ.

**ಓದಲಾಗಿದೆ:**
1) ಷೋಕಾಸ್ ಕಾರಣ ಕೇಳುವ ನೋಟೀಸ್ ಸಂಖ್ಯೆ: ಆಕುಕ 163 ಎಂಎಸ್‌ಎ 98 ದಿನಾಂಕ: 24.09.1999.
2) ಡಾ: ಎಸ್.ಜಿ. ಜಯರಾಜ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಇವರ ರಕ್ಷಣಾ ಹೇಳಿಕೆ ದಿನಾಂಕ: 23.10.2002.
3) ಸರ್ಕಾರದ ಆದೇಶ ಸಂಖ್ಯೆ: ಆಕುಕ 163 ಎಂಎಸ್‌ಎ 98 ದಿನಾಂಕ: 18.12.2002.
4) ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಸಂಖ್ಯೆ: ಮುಜಾಅ (ಜಾಕೋ), ಅ-60/2002-03 ದಿನಾಂಕ: 25.07.2003.
5) ಸರ್ಕಾರದ ತಿಳುವಳಿಕೆ ಪತ್ರ ಸಂಖ್ಯೆ: ಆಕುಕ 163 ಎಂಎಸ್‌ಎ 98 ದಿನಾಂಕ: 23.08.2003.
6) ಡಾ: ಎಸ್.ಜಿ. ಜಯರಾಜ್‌ರವರ ಪ್ರತಿ ರಕ್ಷಣಾ ಹೇಳಿಕೆ (ದಿನಾಂಕ ಇಲ್ಲ).

**ಪ್ರಸ್ತಾವನೆ:**

ಡಾ: ಎಸ್.ಜಿ. ಜಯರಾಜ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಸಾರ್ವಜನಿಕ ಆಸ್ಪತ್ರೆ, ಸಾಗರ, ಶಿವಮೊಗ್ಗ ಜಿಲ್ಲೆ ಇಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದಾಗ ಸರ್ಕಾರದ ಅಧಿಸೂಚನೆ ಸಂಖ್ಯೆ: ಆಕುಕ 382 ಹೆಚ್‌ಎಸ್‌ಹೆಚ್ 92 ದಿನಾಂಕ: 25.05.1992ರಲ್ಲಿ ಸಾರ್ವಜನಿಕ ಆಸ್ಪತ್ರೆ, ಮೂಡಿಗೆರೆ ಇಲ್ಲಿಗೆ ವರ್ಗಾಯಿಸಿ ದಿನಾಂಕ: 04.06.1992ರ ಅಪರಾಹ್ನ ಕಾರ್ಯವಿಮುಕ್ತಿ ಮಾಡಿದ್ದರೂ ನೇಮಿಸಿದ ಸ್ಥಳದಲ್ಲಿ ಕರ್ತವ್ಯಕ್ಕೆ ಹಾಜರಾಗದೆ ಸರ್ಕಾರಿ ಸೇವೆಗೆ ಅನಧಿಕೃತ ಗೈರು ಹಾಜರಾದ ಆಪಾದನೆ, ಮೇಲೆ (1)ರಲ್ಲಿ ಓದಲಾದ ಸರ್ಕಾರದ ಕಾರಣ ಕೇಳುವ ನೋಟೀಸ್‌ನ್ನು ದಿನಾಂಕ: 24.09.1999ರಲ್ಲಿ ದೋಷಾರೋಪಣೆ ಪಟ್ಟಿಯೊಡನೆ ಡಾ: ಜಯರಾಜ್‌ರವರಿಗೆ ಜಾರಿ ಮಾಡಿ ಅವರ ವಿರುದ್ಧ ಮಾಡಲಾಗಿರುವ ಆರೋಪಗಳ ಬಗ್ಗೆ ವಿವರಣೆ ಸಲ್ಲಿಸುವಂತೆ ನಿರ್ದೇಶಿಸಲಾಗಿತ್ತು.

ಮೇಲೆ (1)ರ ಸರ್ಕಾರದ ಷೋಕಾಸ್ ನೋಟೀಸಿಗೆ ಉತ್ತರವಾಗಿ, ಆಪಾದಿತ ಸರ್ಕಾರಿ ಅಧಿಕಾರಿಯು ಮೇಲೆ (2)ರಲ್ಲಿ ಓದಲಾದ ಅವರ ರಕ್ಷಣಾ ಹೇಳಿಕೆ ದಿನಾಂಕ: 23.10.2002ರಲ್ಲಿ ಆರೋಪಗಳನ್ನು ನಿರಾಕರಿಸಿ, ವಿವರಣೆ ಸಲ್ಲಿಸಿದ್ದುದ್ದರಿಂದ ಮೇಲೆ (3)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪ್ರಕರಣದ ವಿಚಾರಣೆ ನಡೆಸಲು ವಿಚಾರಣಾಧಿಕಾರಿಗಳನ್ನು ಹಾಗೂ ಮಂಡನಾಧಿಕಾರಿಗಳನ್ನು ನೇಮಿಸಲಾಯಿತು. ಈ ಆದೇಶದಂತೆ ಮೇಲೆ (4)ರಲ್ಲಿ ಓದಲಾದ ವಿಚಾರಣಾಧಿಕಾರಿಗಳು ವಿಚಾರಣೆ ನಡೆಸಿ, ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ. ವಿಚಾರಣಾ ವರದಿಯಲ್ಲಿ ಆಪಾದಿತರ ಆಪಾದನೆಯು ಸಾಬೀತಾಗಿರುತ್ತದೆ ಎಂಬ ನಿರ್ಣಯಕ್ಕೆ ಬಂದಿದ್ದುದರಿಂದ ಮೇಲೆ (5)ರಲ್ಲಿ ಓದಲಾದ ಸರ್ಕಾರದ ತಿಳುವಳಿಕೆ ಪತ್ರದ ಮೂಲಕ ಆಪಾದಿತರಿಗೆ ಜಾರಿ ಮಾಡಲಾಗಿದ್ದು ವಿಚಾರಣಾ ವರದಿಯನ್ನು ಏಕೆ ಅಂಗೀಕರಿಸಬಾರದೆಂಬ ಬಗ್ಗೆ ಹೇಳಿಕೆಯನ್ನು 15 ದಿನಗಳೊಳಗಾಗಿ ನೀಡುವಂತೆ ನಿರ್ದೇಶಿಸಲಾಗಿತ್ತು. ಮೇಲೆ (6)ರಲ್ಲಿ ಓದಲಾದ ಆಪಾದಿತರು ತಮ್ಮ ಪ್ರತಿ ರಕ್ಷಣಾ

ಹೇಳಿಕೆಯನ್ನು ಸಲ್ಲಿಸಿರುತ್ತಾರೆ. ತಮ್ಮ ರಕ್ಷಣಾ ಹೇಳಿಕೆಯಲ್ಲಿ ಅನಧಿಕೃತ ಗೈರುಹಾಜರಿಯ ಆಪಾದನೆಯನ್ನು ತಳ್ಳಿ ಹಾಕಿ ತಾವು ಮಾನಸಿಕ ಅಸಮತೋಲನಕ್ಕೆ ಒಳಗಾಗಿದ್ದು ಆಗಿಂದಾಗ್ಗೆ ಚಿಕಿತ್ಸೆ ಪಡೆದಿರುವುದಾಗಿ ವೈದ್ಯಕೀಯ ಪ್ರಮಾಣ ಪತ್ರಗಳನ್ನು ನೀಡಿರುವುದಾಗಿ ತಿಳಿಸುತ್ತಾ ವಿಚಾರಣಾಧಿಕಾರಿಗಳು ಈ ದಾಖಲೆಗಳನ್ನು ಗಣನೆಗೆ ತೆಗೆದುಕೊಂಡಿಲ್ಲವೆಂದು ತಪ್ಪು ನಿರ್ಣಯಕ್ಕೆ ಬಂದಿರುತ್ತಾರೆಂದು ತಿಳಿಸಿರುತ್ತಾರೆ.

ಇವರ ಅಹವಾಲನ್ನು ಪರಿಶೀಲಿಸಿದೆ. ಅದನ್ನು ಒಪ್ಪಲು ಸಾಧ್ಯವಿಲ್ಲ. ಏಕೆಂದರೆ ಆಪಾದಿತರು ದಿನಾಂಕ: 04.06.1992 ರಿಂದ 23.8.1993ರ ವರೆಗೆ ಅನಧಿಕೃತ ಗೈರುಹಾಜರಾಗಿದ್ದಾರೆ. ಅವರು ತನಗೆ ಮಾನಸಿಕ ಅಸಮತೋಲನದಿಂದ ಹಾಜರಾಗಲು ಸಾಧ್ಯವಾಗಲಿಲ್ಲವೆಂದು ಹೇಳಿದ್ದರೂ ಸಹ, ಆ ಬಗ್ಗೆ 1993ರಲ್ಲಿ ಯಾವುದೇ ದಾಖಲೆಗಳನ್ನು ಸಲ್ಲಿಸಿರುವುದಿಲ್ಲ. ಇವರು ಮೇಲಿನ ಅವಧಿಗೆ ರಜೆ ಅರ್ಜಿಯನ್ನು ದಿನಾಂಕ: 23.10.2002ರಂದು ನಿರ್ದೇಶಕರಿಗೆ ಕಳುಹಿಸಿರುವುದಾಗಿ ತನ್ನ ಅಹವಾಲಿನಲ್ಲಿ ಹೇಳಿದ್ದಾರೆ. ಇದರಿಂದ ರಜೆ ಪಡೆದ ಸುಮಾರು 10 ವರ್ಷಗಳ ನಂತರ ರಜೆ ಮಂಜೂರು ಮಾಡಲು ರಜೆ ಅರ್ಜಿಯನ್ನು ಸಲ್ಲಿಸಿರುತ್ತಾರೆ.

ಆಪಾದಿತರು ದಿನಾಂಕ: 04.06.1992 ರಿಂದ 23.08.1993ರ ವರೆಗೆ ಅಂದರೆ ಸುಮಾರು 1 ವರ್ಷ, 2 ತಿಂಗಳಿಂದ ಕರ್ತವ್ಯಕ್ಕೆ ಗೈರುಹಾಜರಾದ ಅವಧಿಗೆ ಯಾವುದೇ ರಜೆ ಅರ್ಜಿಯನ್ನು ನೀಡಿರುವುದಿಲ್ಲ. ಸುಮಾರು 10 ವರ್ಷಗಳು ಕಳೆದ ನಂತರ ದಿನಾಂಕ: 23.10.2002ರಂದು ರಜೆ ಮಂಜೂರು ಮಾಡಲು ಅರ್ಜಿ ಸಲ್ಲಿಸಿರುವುದು ವ್ಯಕ್ತವಾಗುತ್ತದೆ.

ಸರ್ಕಾರಿ ನೌಕರರು ತನ್ನ ಇಚ್ಛಾನುಸಾರ ರಜೆಯನ್ನು ಪಡೆಯಲು ಆಸ್ಪದವಿಲ್ಲ. ಇವರು ಒಂದು ವರ್ಷಕ್ಕೂ ಮೇಲ್ಪಟ್ಟು ಅನಧಿಕೃತ ಗೈರುಹಾಜರಾಗಿ, ನಂತರ ಆ ಬಗ್ಗೆ ಯಾವುದೇ ರಜೆ ಅರ್ಜಿಯನ್ನು ಸಲ್ಲಿಸದೇ ಇರುವುದರಿಂದ ಸರ್ಕಾರಿ ಸೇವೆಯಲ್ಲಿ ಇವರು ತೀರಾ ಅನಾಧಾರಣೆ ಹಾಗೂ ಅಸಡ್ಡೆ ಹೊಂದಿರುವುದಾಗಿ ವ್ಯಕ್ತವಾಗುತ್ತದೆ. ಇಂತಹವರನ್ನು ಸರ್ಕಾರಿ ಸೇವೆಯಲ್ಲಿ ಮುಂದುವರಿಸುವುದು ಸೂಕ್ತವಲ್ಲ.

ಸರ್ಕಾರವು ವಿಚಾರಣಾ ವರದಿಯನ್ನು ಮತ್ತು ವೈದ್ಯರ ಪ್ರತಿ ರಕ್ಷಣಾ ಹೇಳಿಕೆ ಹಾಗೂ ದಾಖಲಾತಿಗಳನ್ನು ಕೂಲಂಕಷವಾಗಿ ಪರಿಶೀಲಿಸಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ-8 (vi)ರಡಿಯಲ್ಲಿ ಕಡ್ಡಾಯ ನಿವೃತ್ತಿಗೊಳಿಸಲು ಮತ್ತು ದಿನಾಂಕ: 04.06.1992 ರಿಂದ 23.08.1993 ರವರೆಗಿನ ಅವಧಿಯನ್ನು ಕೆ.ಸಿ.ಎಸ್.ಆರ್. ನಿಯಮ 106-ಎ ರಂತೆ ಪರಿಗಣಿಸಲು ಹಾಗೂ ದಿನಾಂಕ: 24.08.1993 ರಿಂದ 05.11.1993ರ ವರೆಗೆ ಕಡ್ಡಾಯ ನಿರೀಕ್ಷಣಾವಧಿ ಎಂದು ಪರಿಗಣಿಸಲು ತೀರ್ಮಾನಿಸಿದೆ. ಆದುದರಿಂದ ಆದೇಶ.

**ಆದೇಶ ಸಂಖ್ಯೆ: ಆಕುಕ 163 ಎಂಎಸ್ಎ 98, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್, 2003**

ಮೇಲೆ ವಿವರಿಸಿರುವ ಕಾರಣಗಳಿಂದ, ಸರ್ಕಾರವು, ಡಾ: ಎಸ್.ಜಿ. ಜಯರಾಜ್, ಸಾಮಾನ್ಯ ಕರ್ತವ್ಯ ವೈದ್ಯಾಧಿಕಾರಿ, ಚಿಗಟೇರಿ ಜಿಲ್ಲಾ ಆಸ್ಪತ್ರೆ, ದಾವಣಗೆರೆ ಇವರ ವಿರುದ್ಧದ ಅನಧಿಕೃತ ಗೈರುಹಾಜರಾದ ಆಪಾದನೆಗೆ ಈ ಕೆಳಕಂಡಂತೆ ದಂಡನೆ ವಿಧಿಸಿ ಆದೇಶಿಸಿದೆ.

1. ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ-8 (vi)ರಡಿಯಲ್ಲಿ- ಇವರನ್ನು ತಕ್ಷಣದಿಂದ ಜಾರಿಗೆ ಬರುವಂತೆ ಸರ್ಕಾರಿ ಸೇವೆಯಿಂದ ಕಡ್ಡಾಯ ನಿವೃತ್ತಿಗೊಳಿಸಿದೆ. ಕೆ.ಸಿ.ಎಸ್.ಆರ್. ನಿಯಮ-218ರಂತೆ ಪಿಂಚಣಿ ಸವಲತ್ತಿಗೆ ಅರ್ಹತೆ ಹೊಂದಿರುತ್ತಾರೆ.
2. ದಿನಾಂಕ:04.06.1992 ರಿಂದ 23.08.1993ರ ವರೆಗಿನ ಅವಧಿಯನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ 106ಎ ರಂತೆ ಅನಧಿಕೃತ ಗೈರುಹಾಜರಿ ಎಂದು ಘೋಷಿಸಿದೆ.
3. ದಿನಾಂಕ: 24.08.1993ರಿಂದ 05.11.1993ರವರೆಗೆ ಕೆ.ಸಿ.ಎಸ್.ಆರ್. ನಿಯಮ 15 (ಎಫ್) ನಂತೆ ಕಡ್ಡಾಯ ನಿರೀಕ್ಷಣಾ ಅವಧಿ ಎಂದು ಪರಿಗಣಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆ್ಯಂಟನಿ ಮೆಂಡೋನ್ಸಾ,**

ಸರ್ಕಾರದ ಉಪ ಕಾರ್ಯದರ್ಶಿ-1,

ಪಿ.ಆರ್. 1341 ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ: 5319:2003ರಲ್ಲಿ ದಿನಾಂಕ: 18.08.2003ರಂದು ನೀಡಿರುವ ತೀರ್ಪಿನನ್ವಯ ಶ್ರೀ ಎಸ್.ಎ. ಶಫಿ ಅಹಮ್ಮದ್ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ ಔರಾದ್ ಇವರ ಅಮಾನತ್ತನ್ನು ತೆರವುಗೊಳಿಸುವ ಬಗ್ಗೆ-ಆದೇಶ.

**ಓದಲಾಗಿದೆ:** 1) ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಬೀದರ್ ಇವರ ಆದೇಶ ಸಂಖ್ಯೆ: ಜಿಪಭೀ:ಸಿಬ್ಬಂದಿ-2:ಸಿಆರ್:20:2002-2003:34135, ದಿನಾಂಕ: 26.03.2003.

2) ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ಅರ್ಜಿ ಸಂಖ್ಯೆ: 5319:2003ರಲ್ಲಿ ದಿನಾಂಕ: 18.08.2003ರಂದು ನೀಡಿರುವ ತೀರ್ಪು.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಆದೇಶದಲ್ಲಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಬೀದರ್ ಇವರು ಶ್ರೀ ಎಸ್.ಎ. ಶಫಿ ಅಹಮ್ಮದ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪ ವಿಭಾಗ, ಔರಾದ್ ಇವರು ಔರಾದ್ ತಾಲ್ಲೋಕ್ ಬನ್ನಿ ತಾಂಡದಲ್ಲಿ ಕುಡಿಯುವ ನೀರಿನ ಕಾಮಗಾರಿಗಾಗಿ 2 ಲಕ್ಷ ರೂ.ಗಳನ್ನು ಡ್ರಾ ಮಾಡಿಕೊಂಡು ಸುಮಾರು 30,000/- ರೂ. ಗಳಷ್ಟು ಕೆಲಸ ಮಾಡಿ ಹಣವನ್ನು ತಾತ್ಕಾಲಿಕವಾಗಿ ದುರುಪಯೋಗ ಮಾಡಿಕೊಂಡಿರುವರೆಂಬ

ಬಗ್ಗೆ, ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ರವರು, ಕುಡಿಯುವ ನೀರಿನ ಸಮಸ್ಯೆಗಳಿರುವ ಗ್ರಾಮಗಳಿಗೆ ಬೇಟಿ ಕೊಟ್ಟಾಗ ಸದರಿ ಅಧಿಕಾರಿ ಕರ್ತವ್ಯಕ್ಕೆ ಅನಧಿಕೃತ ಗೈರು ಹಾಜರಾಗಿರುವರೆಂಬ ಬಗ್ಗೆ ಔರಾದ್ ತಾಲ್ಲೋಕ್ ಹಸ್ಸಿಕೆರ ಗ್ರಾಮದಲ್ಲಿ ಕುಡಿಯುವ ನೀರಿನ ಯೋಜನೆಗೆ ವಿದ್ಯುತ್ ಸಂಪರ್ಕ ಪಡೆಯಲು ಕೆಪಿಟಿಸಿಎಲ್‌ಗೆ ದಾಖಲಾತಿಗಳನ್ನು ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಹಾಗೂ ಅವರು ಔರಾದ್ ಕೇಂದ್ರ ಸ್ಥಾನದಲ್ಲಿ ವಾಸವಾಗಿರುವುದಿಲ್ಲವೆಂಬ ಕಾರಣಗಳಿಂದಾಗಿ ಸದರಿ ಅಧಿಕಾರಿಯ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಅವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಿದ್ದರು.

ಶ್ರೀ ಎಸ್.ಎ. ಶಫಿ ಅಹಮ್ಮದ್ ಇವರು ತಮ್ಮನ್ನು ಸೇವೆಯಿಂದ ಅಮಾನತ್ತುಗೊಳಿಸಿರುವ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್ ಬೀದರ್ ಇವರ ಆದೇಶವನ್ನು ಪ್ರಶ್ನಿಸಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯಲ್ಲಿ ಅರ್ಜಿ ಸಂಖ್ಯೆ: 5319:03ನ್ನು ದಾಖಲಿಸಿದ್ದರು. ಮೇಲೆ ಓದಲಾದ ಕ್ರಮ ಸಂಖ್ಯೆ: (2)ರಲ್ಲಿ ಕರ್ನಾಟಕ ಆಡಳಿತ ನ್ಯಾಯ ಮಂಡಳಿಯು ತೀರ್ಪನ್ನು ನೀಡಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರು ಶ್ರೀ ಎಸ್.ಎ. ಶಫಿ ಅಹಮ್ಮದ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ಗ್ರೂಫ್-ಎ ವೃಂದದ ಅಧಿಕಾರಿಯಾಗಿದ್ದು, ಕೆಸಿಎಸ್ (ಸಿಸಿಎ) ನಿಯಮಾವಳಿಗಳ 1957ರ ನಿಯಮಗಳ-15 (2) (ಎ)ಗೆ ಮಾಡಲಾಗಿರುವ ತಿದ್ದುಪಡಿಯನ್ವಯ ಗ್ರೂಪ್-ಎ ವೃಂದದ ಅಧಿಕಾರಿಯನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸುವ ಅಧಿಕಾರವು ಸರ್ಕಾರಕ್ಕೆ ಇರುವುದರಿಂದ ಮುಖ್ಯಕಾರ್ಯನಿರ್ವಾಹಣಾ ಅಧಿಕಾರಿಯವರು ಶ್ರೀ ಎಸ್.ಎ. ಶಫಿ ಅಹಮ್ಮದ್, ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಇವರನ್ನು ಸೇವೆಯಿಂದ ಅಮಾನತ್ತಿನಲ್ಲಿರಿಸಿದ ಆದೇಶ ವ್ಯಾಪ್ತಿಯಿಲ್ಲದೆ ಮಾಡಿರುವ ಆದೇಶವೆಂದು ನಿರ್ಣಯಿಸಿ ಸದರಿ ಆದೇಶವನ್ನು ರದ್ದುಪಡಿಸಿ ಅವರನ್ನು ಸೇವೆಗೆ ಪುನರ್ ಸ್ಥಾಪಿಸುವಂತೆ ಹಾಗೂ ಸದರಿ ಅವಧಿಯನ್ನು ಕರ್ತವ್ಯದ ಮೇಲಿನ ಅವಧಿ ಎಂದು ಪರಿಗಣಿಸುವಂತೆ ತೀರ್ಪು ನೀಡಿರುತ್ತದೆ.

ಪ್ರಕರಣದ ವಿಷಯ, ಸಂದರ್ಭಗಳನ್ನು ಸರ್ಕಾರವು ಪರಿಶೀಲಿಸಿ ಶ್ರೀ ಎಸ್.ಎ. ಶಫಿ ಅಹಮ್ಮದ್ ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಔರಾದ್ ಇವರ ಮೇಲಿನ ಇಲಾಖಾ ವಿಚಾರಣೆ ಬಾಕಿ ಇಟ್ಟು, ಅವರ ಅಮಾನತ್ತನ್ನು ತೆರವುಗೊಳಿಸಲು ತೀರ್ಮಾನಿಸಿದೆ. ಆದ್ದರಿಂದ ಈ ಆದೇಶ.

**ಆದೇಶ ಸಂಖ್ಯೆ: ಗ್ರಾಅಪ 18 ಇಎನ್‌ಕ್ಯೂ 03, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು 1957ರ ಕರ್ನಾಟಕ ಸರ್ಕಾರಿ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ)ರ ನಿಯಮಗಳ 10ನೇ ನಿಯಮದ (5)ನೇ ಉಪ ನಿಯಮದ (ಸಿ) ಖಂಡದಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಎಸ್.ಎ. ಶಫಿ ಅಹಮ್ಮದ್, ಅಂದಿನ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ಉಪವಿಭಾಗ, ಔರಾದ್ ಇವರ ಮೇಲೆ ಇಲಾಖಾ ವಿಚಾರಣೆ ಬಾಕಿ ಇಟ್ಟು ಈ ತಕ್ಷಣದಿಂದ ಜಾರಿಗೆ ಬರುವಂತೆ ಅವರ ಅಮಾನತ್ತನ್ನು ತೆರವುಗೊಳಿಸಿ, ಅವರನ್ನು ಸೇವೆಯಲ್ಲಿ ಪುನರ್‌ಸ್ಥಾಪಿಸಿ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),

ಪಿ.ಆರ್. 1342 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಕಂದಾಯ ಸಚಿವಾಲಯ

## ಸುತ್ತೋಲೆ

**ಸಂಖ್ಯೆ: ಆರ್‌ಡಿ 72 ಬಿಎನ್‌ಸಿ 2003, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್, 2003**

**ವಿಷಯ:** ಗ್ರಾಮ ಲೆಕ್ಕಿಗರ ವೇತನವನ್ನು ಬ್ಯಾಂಕ್‌ಗಳ ಮೂಲಕ ವಿತರಿಸುವ ಬಗ್ಗೆ.

ರಾಜ್ಯದ ಪ್ರತಿ ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಗ್ರಾಮ-ಲೆಕ್ಕಿಗರುಗಳಿಗೆ ಸಂಬಂಧಿಸಿದ ತಾಲ್ಲೂಕಿನ ತಹಶೀಲ್ದಾರ್ ವೇತನ ತೆಗೆಯುವ ಹಾಗೂ ಬಟವಾಡೆ ಮಾಡುವ ಅಧಿಕಾರಿಯಾಗಿರುತ್ತಾರೆ. ನವೆಂಬರ್, 2003ನೇ ತಿಂಗಳಿನಿಂದ ಈ ಮುಂದೆ ತಿಳಿಸಿದ ಕ್ರಮದಲ್ಲಿ ವೇತನ ಬಟವಾಡೆ ಮಾಡುವ ಎಲ್ಲಾ ತಹಶೀಲ್ದಾರರು: ಅಧಿಕಾರಿಗಳು ಕ್ರಮ ಕೈಗೊಳ್ಳತಕ್ಕದೆಂದು ಆದೇಶಿಸಲಾಗಿದೆ.

ಎಲ್ಲಾ ಗ್ರಾಮಲೆಕ್ಕಿಗರು ತಾವು ಕೆಲಸ ನಿರ್ವಹಿಸುತ್ತಿರುವ ವೃತ್ತಕ್ಕೆ ಹತ್ತಿರವಿರುವ ಯಾವುದೇ ರಾಷ್ಟ್ರೀಕೃತ ಅಥವಾ ಅನುಸೂಚಿತ ಅಥವಾ ಸಹಕಾರಿ ಬ್ಯಾಂಕ್‌ನಲ್ಲಿ ತಮ್ಮ ವೈಯಕ್ತಿಕ ಖಾತೆಯನ್ನು ತೆರೆಯತಕ್ಕದ್ದು. ಗ್ರಾಮಲೆಕ್ಕಿಗರು ತಮ್ಮ ಬ್ಯಾಂಕ್ ಖಾತೆಯ ಬಗ್ಗೆ ವಿವರ ನೀಡಿದ ನಂತರ ಸಂಬಂಧಿಸಿದ ತಹಶೀಲ್ದಾರರು: ಅಧಿಕಾರಿಗಳು ಈ ರೀತಿ ತೆರೆದ ಖಾತೆಗೆ ಗ್ರಾಮಲೆಕ್ಕಿಗರ ವೇತನ ಹಾಗೂ ಅವಧಿಗೆ ಸಂದಾಯವಾಗಬಹುದಾದ ಇತರೆ ಯಾವುದೇ ಭತ್ಯೆ ಇತ್ಯಾದಿಗಳನ್ನು ಈ ಖಾತೆಗೆ ನೇರವಾಗಿ ಜಮಾ ಮಾಡಲು ಕ್ರಮ ಕೈಗೊಳ್ಳತಕ್ಕದ್ದು. ಯಾವುದೇ ಕಾರಣಕ್ಕಾಗಿ ಗ್ರಾಮ-ಲೆಕ್ಕಿಗರಿಗೆ ಅವರ ವೇತನವಾಗಲಿ ಅಥವಾ ಅವರಿಗೆ ಸಂದಾಯವಾಗಬಹುದಾದ ಇತರೆ ಯಾವುದೇ ಭತ್ಯೆಗಳನ್ನಾಗಲಿ ತಾಲ್ಲೂಕು ಕಛೇರಿಯಲ್ಲಿ ನಗದು ರೂಪದಲ್ಲಿ ವಿತರಿಸಬಾರದೆಂದು ಈ ಮೂಲಕ ಆದೇಶಿಸಿದೆ.

ಎಲ್ಲಾ ತಹಶೀಲ್ದಾರರು ಈ ನಿಟ್ಟಿನಲ್ಲಿ ಕ್ರಮ ಕೈಗೊಂಡು ಜಿಲ್ಲಾಧಿಕಾರಿಗಳ ಮೂಲಕ ಸರ್ಕಾರಕ್ಕೆ ವರದಿ ಸಲ್ಲಿಸುವಂತೆ ಸೂಚಿಸಲಾಗಿದೆ.

**ಕೆ. ಸುಧಾಕರ ಶೆಟ್ಟಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1343 ಕಂದಾಯ ಇಲಾಖೆ (ಪರಿಹಾರ ಮತ್ತು ಸೇವೆಗಳು-2).

**ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಶ್ರೀ ಮಹಮ್ಮದ್ ಸರ್ವರ್, ಹಿಂದಿನ ಬಾಲವಿಕಾಸ ಯೋಜನಾಧಿಕಾರಿ, ಬಳ್ಳಾರಿ(ಗ್ರಾ) ಇವರನ್ನು ಸರ್ಕಾರಿ ಸೇವೆಗೆ ಪುನರ್ ಸ್ಥಾಪಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಮಮಇ 37 ಎಸ್‌ಜೆಡಿ 98 ದಿನಾಂಕ: 27.06.2001.
2) ಶ್ರೀ ಮಹಮ್ಮದ್ ಸರ್ವರ್, ಇವರ ಪುನರ್ ಪರಿಶೀಲನಾ ಅರ್ಜಿ ದಿನಾಂಕ: 25.07.2001.
3) ಸರ್ಕಾರಿ ಆದೇಶ ಸಂಖ್ಯೆ: ಮಮಇ 37/ಎಸ್‌ಜೆಡಿ/98, ದಿನಾಂಕ: 23.09.2002.
4) ಕರ್ನಾಟಕ ಆಡಳಿತ ನ್ಯಾಯ ಮಂಡಳಿ ಅರ್ಜಿ ಸಂಖ್ಯೆ: 14156/02, ದಿನಾಂಕ: 01.04.2003.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ: 27.06.2001ರ ಆದೇಶದಲ್ಲಿ ಶ್ರೀ ಮಹಮ್ಮದ್ ಸರ್ವರ್, ಇವರು 1994-95ನೇ ಸಾಲಿನಲ್ಲಿ, ಬಾಲವಿಕಾಸ ಯೋಜನಾಧಿಕಾರಿಯಾಗಿ ಬಳ್ಳಾರಿ ಗ್ರಾಮಾಂತರ ಜಿಲ್ಲೆ ಇಲ್ಲಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ 7 ಗುರುತರ ಆರೋಪಗಳ ಮೇಲೆ ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿಗಳು 1957ರ ನಿಯಮ 11 ರಡಿಯಲ್ಲಿ ಇಲಾಖಾ ವಿಚಾರಣೆಯನ್ನು ನಡೆಸಿದ್ದು ಅವರ ವಿರುದ್ಧದ 7 ಆರೋಪಗಳಲ್ಲಿ 5 ಆರೋಪಗಳು ಸಾಬೀತಾಗಿದ್ದರಿಂದ ಅವರು ಸರ್ಕಾರಕ್ಕೆ ರೂ. 1,10,500-00ಗಳ ನಷ್ಟ ಉಂಟು ಮಾಡಿದ್ದು ಅದನ್ನು ಬಡ್ಡಿ ಸಮೇತವಾಗಿ ವಸೂಲು ಮಾಡಲು ಆದೇಶಿಸಿ ಅವರನ್ನು ಕರ್ನಾಟಕ ನಾಗರೀಕ ಸೇವಾ (ಸಿಸಿಎ) 1957ರ ನಿಯಮ 8(vii)ರಡಿಯಲ್ಲಿ ಸರ್ಕಾರಿ ಸೇವೆಯಿಂದ ವಜಾ ಮಾಡಲಾಗಿರುತ್ತದೆ.

ಮೇಲೆ ಓದಲಾದ ಕ್ರ.ಸಂ(2) ದಿನಾಂಕ: 25.07.2001ರಲ್ಲಿ ಶ್ರೀ ಮಹಮ್ಮದ್ ಸರ್ವರ್‌ರವರು ದಿನಾಂಕ: 27.06.2001ರ ಆದೇಶದ ಪುನರ್ ಪರಿಶೀಲನೆಗೆ ಅರ್ಜಿಯನ್ನು ಸರ್ಕಾರಕ್ಕೆ ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮ ಸಂಖ್ಯೆ (3)ರ ದಿನಾಂಕ: 23.09.2002ರ ಆದೇಶದಲ್ಲಿ ಶ್ರೀ ಮಹಮ್ಮದ್ ಸರ್ವರ್‌ರವರು ಸರ್ಕಾರಕ್ಕೆ ಸಲ್ಲಿಸಿದ ಮನವಿಯನ್ನು ಪರಿಶೀಲಿಸಿ, ಆದೇಶ ಸಂಖ್ಯೆ: ಮಮಇ/37/SJD98 ದಿನಾಂಕ: 27.06.2001ರ ಆದೇಶದ ಪುನರ್ ಪರಿಶೀಲನಾ ಅರ್ಜಿಯನ್ನು ಸರ್ಕಾರವು ತಿರಸ್ಕರಿಸಿರುತ್ತದೆ.

ಶ್ರೀ ಮಹಮ್ಮದ್ ಸರ್ವರ್‌ರವರು ಕರ್ನಾಟಕ ನ್ಯಾಯಮಂಡಲಿಯಲ್ಲಿ ಅರ್ಜಿ ಸಲ್ಲಿಸಿದ್ದು, ಕರ್ನಾಟಕ ಆಡಳಿತ ನ್ಯಾಯಮಂಡಳಿಯು, ಶ್ರೀ ಮಹಮ್ಮದ್ ಸರ್ವರ್‌ರವರನ್ನು ಸೇವೆಯಿಂದ ತೆಗೆದುಹಾಕಿದ ಆದೇಶದ ವಿರುದ್ಧ ಅರ್ಜಿ ಸಲ್ಲಿಸಿರುವ ಅರ್ಜಿಯನ್ನು, ಪ್ರಾಥಮಿಕ ವಿಚಾರಣೆಯಲ್ಲಿಯೇ ಪರಿಶೀಲಿಸಿ ಮೇಲೆ ಕ್ರಮಾಂಕ (4)ರಲ್ಲಿ ಓದಲಾದ ದಿನಾಂಕ: 01.04.2003ರ ಆದೇಶದಲ್ಲಿ ಈ ಕೆಳಕಂಡಂತೆ ಆದೇಶಿಸಿದೆ.

> In the circumstances it is clear that the order Annexure-A5 bearing No. Ma.Ma.E. 37 SJD 98, Dated: 27.06.2001 and Annexure-A7 hearing No.Ma.Ma.E. 37 SJD 98 Dated: 23.09.2002 both are vitiated on account of non-conformity with Rule 11 of the CCA Rules and deserves to be and are setaside. It is ordered that having regard to the fact that nearly five years have elasped since the initiation of disciplinary proceedings and its fruitless conclusion, the matter is remitted to the Disciplinary Authority to hold the enquiry afresh by recording the evidences of the witnesses cited in the charge sheet strictly in accordance with Rule 11 of the CCA Rules and to conclude the disciplinary proceedings in nine months in accordance with the Official Memorandum Dated: 28.06.2001. The Applicant shall be entitled to all the consequential benefits on setting aside of orders Annexures-A5 and A7.

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 14156/2002 ದಿನಾಂಕ: 01.04.2003ರಲ್ಲಿ ನೀಡಿರುವ ತೀರ್ಪಿನ ಹಿನ್ನೆಲೆಯಲ್ಲಿ ಸರ್ಕಾರವು ಅರ್ಜಿದಾರರಿಗೆ ಸೇವೆಗೆ ಪುನರ್ ಸ್ಥಾಪಿಸಿದ ನಂತರ ತತ್ಪರಿಣಾಮ ಸೌಲಭ್ಯಗಳನ್ನು ನೀಡುವುದಕ್ಕೆ ಸಂಬಂಧಿಸಿದಂತೆ ಮರುಪರಿಶೀಲನಾ ಅರ್ಜಿ ಸಲ್ಲಿಸಲು ಕಾನೂನು ಇಲಾಖೆಗೆ ಕೋರಲಾಗಿತ್ತು. ಈ ಪ್ರಕರಣದಲ್ಲಿ ಕಾನೂನು ಇಲಾಖೆಯು ಕೆ.ಎ.ಟಿ. ಆದೇಶವನ್ನು ಪರಿಶೀಲಿಸಿದ ನಂತರ, ಮರುಪರಿಶೀಲನಾ ಅರ್ಜಿ ಸಲ್ಲಿಸಲು ನ್ಯಾಯ ಸಮ್ಮತವಾದ ಕಾರಣಗಳಿಲ್ಲವೆಂದು ಅಭಿಪ್ರಾಯ ನೀಡಿದೆ. ಆದುದರಿಂದ ಕರ್ನಾಟಕ ನ್ಯಾಯ ಮಂಡಳಿಯ ಆದೇಶದಂತೆ ಶ್ರೀ ಮಹಮ್ಮದ್ ಸರ್ವರ್ ರವರನ್ನು ಸೇವೆಗೆ ಪುನರ್ ಸ್ಥಾಪಿಸಿ ಅವರ ವಿರುದ್ಧದ ಆಪಾದನೆಯ ಮೇರೆಗೆ ಹೊಸದಾಗಿ ಇಲಾಖಾ ವಿಚಾರಣೆಯನ್ನು ನಡೆಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಮಮಇ 97 ಎಸ್‌ಜೆಡಿ 2003, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಕರ್ನಾಟಕ ಆಡಳಿತ ನ್ಯಾಯ ಮಂಡಳಿಯ ಅರ್ಜಿ ಸಂಖ್ಯೆ: 14156/2002ರಲ್ಲಿ ದಿನಾಂಕ: 01.04.2003ರಂದು ನೀಡಿದ ತೀರ್ಪಿನಂತೆ ಶ್ರೀ ಮಹಮ್ಮದ್ ಸರ್ವರ್, ಹಿಂದಿನ ಬಾಲವಿಕಾಸ ಯೋಜನಾಧಿಕಾರಿ, ಬಳ್ಳಾರಿರವರನ್ನು ಸರ್ಕಾರಿ ಸೇವೆಗೆ ಹಿಂದಕ್ಕೆ ತೆಗೆದುಕೊಂಡು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ಉತ್ತರ ಕನ್ನಡ ಜಿಲ್ಲೆಯ ಅಂಕೋಲಾ ತಾಲ್ಲೂಕಿನಲ್ಲಿ ಖಾಲಿ ಇರುವ ಬಾಲವಿಕಾಸ ಯೋಜನಾಧಿಕಾರಿ ಹುದ್ದೆಗೆ ಸ್ಥಳನಿಯುಕ್ತಿಗೊಳಿಸಲಾಗಿದೆ.

ಇವರನ್ನು ಸೇವೆಯಿಂದ ತೆಗೆದು ಹಾಕಿದ ದಿನಾಂಕದಿಂದ ಅವರನ್ನು ಸೇವೆಗೆ ಹಿಂದಕ್ಕೆ ತೆಗೆದುಕೊಳ್ಳಲು ಆದೇಶ ಹೊರಡಿಸಿದ ದಿನಾಂಕದವರೆವಿಗಿನ ಅವಧಿಯನ್ನು ಕರ್ತವ್ಯದ ಅವಧಿಯೆಂದು ಪರಿಗಣಿಸಿದೆ. ಇದರಿಂದ ಅವರಿಗೆ ಲಭ್ಯವಾಗುವ ಸೌಲಭ್ಯಗಳನ್ನು ನೀಡಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ಧಾಂತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 1344

## ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಸಚಿವಾಲಯ

**ವಿಷಯ:** ಶ್ರೀ ಭಕ್ತ ರಾಮೇಗೌಡ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅಧಿಕಾರಿ ಅವರ ವಿರುದ್ಧದ ಇಲಾಖಾ ವಿಚಾರಣೆ-ದಂಡನೆ ವಿಧಿಸಿ ಅಂತಿಮ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರದ ಆದೇಶ ಕ್ರಮಾಂಕ: ಸಿಆಸುಇ 52 ಎಸ್‌ಇಎನ್ 97 ದಿನಾಂಕ: 16.11.2000.
2) ಶ್ರೀ ಬಿ. ರಂಗಸ್ವಾಮಿ ನಿವೃತ್ತ ನ್ಯಾಯಾಧೀಶರು ಅವರ ದಿನಾಂಕ: 01.04.2003ರ ವಿಚಾರಣಾ ವರದಿ.
3) ನೋಟೀಸ್ ಕ್ರಮಾಂಕ: ಸಿಆಸುಇ 52 ಎಸ್‌ಇಎನ್ 97, ದಿನಾಂಕ: 30.04.2003.
4) ಶ್ರೀ ಭಕ್ತರಾಮೇಗೌಡ, ಕೆ.ಎ.ಎಸ್. (ಕಿರಿಯ ಶ್ರೇಣಿ) ಅವರ ಉತ್ತರ ದಿನಾಂಕ: 21.06.2003.

**ಪ್ರಸ್ತಾವನೆ:**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ದೇವನಹಳ್ಳಿ ತಾಲ್ಲೂಕಿನ ತಹಶೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ದೇವನಹಳ್ಳಿ ತಾಲ್ಲೂಕಿನ ಕುಂದಾಣಿ ಹೋಬಳಿ, ಕೊಟ್ಟಿಗೆ ತಿಮ್ಮೇನಹಳ್ಳಿ ಗ್ರಾಮದ ಸರ್ವೆ ನಂಬರು 9,10,11,12 ಮತ್ತು 13ರಲ್ಲಿ ಬರುವ ಕೆಲವು ಜಮೀನುಗಳನ್ನು ವ್ಯವಸಾಯೋತ್ತರ ಉದ್ದೇಶಕ್ಕಾಗಿ ಭೂ ಪರಿವರ್ತನೆಗೆ ಶಿಫಾರಸ್ಸು ಮಾಡುವಲ್ಲಿ ವಿಧಿವಿಧಾನಗಳನ್ನು ಪಾಲಿಸದೇ ಮತ್ತು ಕಾಯ್ದೆ: ನಿಯಮಗಳನ್ನು ಉಲ್ಲಂಘಿಸಿ ಕಾನೂನು ಬಾಹಿರವಾಗಿ ಭೂ ಪರಿವರ್ತನೆಗೆ ಅನುಮತಿ ನೀಡುವ ಮೂಲಕ ದುರ್ನಡತೆ ಎಸಗಿದ ಆರೋಪಗಳಿಗಾಗಿ ಇತರರೊಡನೆ ಶ್ರೀ ಭಕ್ತರಾಮೇಗೌಡ, ಕೆ.ಎ.ಎಸ್. ಅಧಿಕಾರಿ ಅವರ ವಿರುದ್ಧವೂ ಮೇಲೆ (1)ರಲ್ಲಿ ಓದಲಾದ ದಿನಾಂಕ: 16.11.2000ರ ಸರ್ಕಾರಿ ಆದೇಶದಲ್ಲಿ ಇಲಾಖಾ ವಿಚಾರಣೆಯನ್ನು ಆದೇಶಿಸಿ ಶ್ರೀ ಬಿ. ರಂಗಸ್ವಾಮಿ, ನಿವೃತ್ತ ನ್ಯಾಯಾಧೀಶರು ಅವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಲಾಯಿತು. ವಿಚಾರಣೆ ನಡೆಸಿದ ವಿಚಾರಣಾಧಿಕಾರಿಗಳು ಮೇಲೆ (2)ರಲ್ಲಿ ಓದಲಾದ ದಿನಾಂಕ: 01.04.2003ರ ವಿಚಾರಣಾ ವರದಿ ಸಲ್ಲಿಸಿ ಆರೋಪಗಳ ಕುರಿತು ಈ ಕೆಳಕಂಡ ನಿರ್ಣಯ ನೀಡಿದರು.

ಶ್ರೀ ಭಕ್ತರಾಮೇಗೌಡ, ಕೆ.ಎ.ಎಸ್. ಅಧಿಕಾರಿ ಅವರು ಬೆಂಗಳೂರು ಗ್ರಾಮಾಂತರ ಜಿಲ್ಲೆ ದೇವನಹಳ್ಳಿ ತಾಲ್ಲೂಕು ತಹಶೀಲ್ದಾರ್‌ರಾಗಿ ಕಾರ್ಯನಿರ್ವಹಿಸುತ್ತಿದ್ದಾಗ ಶ್ರೀಮತಿ ಲೀಲಾ ಗೋಪಾಲ್‌ದಾಸ್ ಜಗತ್ತಿಯಾನಿ ಅವರು ದೇವನಹಳ್ಳಿ ತಾಲ್ಲೂಕಿನ ಕೊಟ್ಟಿಗೆ ತಿಮ್ಮನಹಳ್ಳಿ ತಾಲ್ಲೂಕಿನ ಸರ್ವೆ ನಂಬರು 9,10,11, 12 ಮತ್ತು 13ರಲ್ಲಿ ಬರುವ ಜಮೀನುಗಳ ಭೂ ಪರಿವರ್ತನಾ ಅರ್ಜಿಗಳನ್ನು ದೇವನಹಳ್ಳಿ ತಾಲ್ಲೂಕು ಕಛೇರಿಗೆ ದಿನಾಂಕ: 31.07.1989, 27.08.1990ರಂದು ಸಲ್ಲಿಸಿರುತ್ತಾರೆ. ಸದರಿ ಅರ್ಜಿದಾರರು ಕೊಟ್ಟಿಗೆ ತಿಮ್ಮೇನಹಳ್ಳಿ ಸರ್ವೆ ನಂ. 9ರಲ್ಲಿ 5 ಎಕರೆ 3ಗುಂಟೆ ಜಮೀನು ಸರ್ವೆ ನಂಬರು 10ರಲ್ಲಿ 5 ಎಕರೆ 3 ಗುಂಟೆ ಜಮೀನು ಮತ್ತು ಸರ್ವೆ ನಂಬರ್ 10,11,12ರಲ್ಲಿ 12 ಎಕರೆ 32 ಗುಂಟೆ ಜಮೀನುಗಳಲ್ಲಿ ಕಾರ್ಮಿಕರ ವಸತಿಗೋಸ್ಕರ ವಾಸದ ಮನೆಗಳನ್ನು ಕಟ್ಟಲು ಭೂ ಪರಿವರ್ತನೆ ಮಾಡಿಕೊಡಬೇಕೆಂದು ಸಲ್ಲಿಸಿದ ಮನವಿಗಳನ್ನು ಕುಂದಾಣಿ ಹೋಬಳಿಯ ರಾಜಸ್ವ ನಿರೀಕ್ಷಕರು ಭೂ ಪರಿವರ್ತನೆ ಮಾಡಬಹುದೆಂದು ಸಲ್ಲಿಸಿದ ವರದಿಯ ಮೇರೆಗೆ ಅಂದಿನ ತಹಶೀಲ್ದಾರ್ ಆರೋಪಿತ ಅಧಿಕಾರಿ ಶ್ರೀ ಭಕ್ತರಾಮೇಗೌಡರವರು ಕೋಹಿರಾ ಮಂಡಳಿ ಪಂಚಾಯತಿಯ ಪ್ರಧಾನರವರಿಗೆ ಪತ್ರ ವ್ಯವಹಾರ ನಡೆಸಿದ್ದು ಈ ಬಗ್ಗೆ ಪ್ರಧಾನರು ಭೂ ಪರಿವರ್ತನೆ ಬಗ್ಗೆ ಆಕ್ಷೇಪಣೆ ಇಲ್ಲವೆಂದು ಪತ್ರ ಬರೆದಿರುತ್ತಾರೆ. ಆರೋಪಿತ ಅಧಿಕಾರಿಯವರು ಸದರಿ ಕೊಟ್ಟಿಗೆ ತಿಮ್ಮೇನಹಳ್ಳಿ ಗ್ರಾಮದ ಮೇಲ್ಕಂಡ ಸರ್ವೆ ನಂಬರುಗಳನ್ನು ಭೂ ಪರಿವರ್ತನೆ ಶುಲ್ಕವನ್ನು ಚಲನ್ ಕಟ್ಟಿಸಿಕೊಂಡು ಭೂ ಪರಿವರ್ತನೆಯನ್ನು ಷರತ್ತುಗಳಿಗೆ ಒಳಪಡಿಸಿ ಅಧಿಕೃತ ಜ್ಞಾಪನ ಹೊರಡಿಸಿರುತ್ತಾರೆ. ಆದರೆ ಕೊಟ್ಟಿಗೆ ತಿಮ್ಮನಹಳ್ಳಿ ಸರ್ವೆ ನಂ.9ರಲ್ಲಿನ 5 ಎಕರೆ 3 ಗುಂಟೆ ಬಗ್ಗೆ ಅಂದಿನ ತಹಶೀಲ್ದಾರ್‌ರವರು ದಿನಾಂಕ: 13.11.1989ರಂದು ಹಿಂಬರಹ ನೀಡಿ ಅಧಿಕೃತ ದಾಖಲೆಗಳೊಡನೆ ಅರ್ಜಿ ಸಲ್ಲಿಸಿದ್ದಲ್ಲಿ ನಿಮ್ಮ ಕೋರಿಕೆಯನ್ನು ಪರಿಗಣಿಸಲಾಗುವುದೆಂದು ತಿಳಿಸಲಾಗಿರುತ್ತದೆ. ನಗರ ಯೋಜನೆ ಇಲಾಖೆಯವರು ಭೂ ಪರಿವರ್ತನೆ ಮಂಜೂರಾತಿ ಬಗ್ಗೆ ಶಿಫಾರಸ್ಸು ಮಾಡಿಲ್ಲವೆಂದು ಅರ್ಜಿದಾರರ ಅರ್ಜಿಯನ್ನು ತಿರಸ್ಕರಿಸಿದ್ದಾರೆಂದು ಕಂಡುಬರುತ್ತದೆ. ಹಾಗಿದ್ದಲ್ಲಿ ಮತ್ತೆ ಸದರಿ ತಹಶೀಲ್ದಾರ್ ಶ್ರೀಮತಿ ಲೀಲಾ ಗೋಪಾಲ್‌ದಾಸ್ ಜಗತ್ತಿಯಾನಿ ರವರಿಂದ ಅರ್ಜಿ ಪಡೆದು ಅಥವಾ ಭೂ ಪರಿವರ್ತನೆ ಅಧಿಕೃತ ಜ್ಞಾಪನ ಪತ್ರ ನೀಡಿರುವುದು ಸರಿಯೇ ಅಥವಾ ನ್ಯಾಯಯುತವೇ ಎಂಬ ಪ್ರಶ್ನೆ ಉದ್ಭವಿಸುತ್ತದೆ. ಆರ್‌ಡಿ 520 ಎಲ್‌ಜಿಬಿ 84, ದಿನಾಂಕ: 12.03.1984ರ ಸುತ್ತೋಲೆಯನ್ವಯ ಸಕ್ಷಮ ಪ್ರಾಧಿಕಾರಿಯು ಒಂದು ಸಾರಿ ತೆಗೆದುಕೊಂಡ ತೀರ್ಮಾನವನ್ನು ಅರ್ಜಿದಾರರಿಗೆ ತಿಳಿಸಿದ ಪಕ್ಷದಲ್ಲಿ ಪುನಹ ಅದೇ ತೀರ್ಮಾನವನ್ನು ಪರಿಗಣಿಸುವ ಅಥವಾ ಮಾರ್ಪಾಡು ಮಾಡುವ ಅಧಿಕಾರವಿರುವುದಿಲ್ಲ. ಅರ್ಜಿದಾರರಿಗೆ ಹಿಂಬರಹ ನೀಡಿ ಸಕ್ಷಮ ಪ್ರಾಧಿಕಾರಿಯನ್ನು ಸಂಪರ್ಕಿಸಬಹುದೆಂದು ತಿಳಿಸಬಹುದು. ಉಳಿದಂತೆ ಸಕ್ಷಮ ಪ್ರಾಧಿಕಾರಿಯೇ ಹೊರಡಿಸಿದ ಆದೇಶವನ್ನು ಅದೇ ಪ್ರಾಧಿಕಾರಿಯು ಪರಾಮರ್ಶಿಸುವ ಅಥವಾ ಮಾರ್ಪಾಡು ಮಾಡುವ ಅಧಿಕಾರ ಹೊಂದಿರುವುದಿಲ್ಲ.

ಅರ್ಜಿದಾರರು ಅರ್ಜಿಯ ಜೊತೆ ಐ.ಎಲ್.ಆರ್.ಟಿ.ಸಿ., ಆರ್.ಆರ್.ಎನ್. ಕಂಬರೆನ್ಸ್, ಬಿಲ್ಡಿಂಗ್ ಪ್ಲಾನ್ ಗ್ರಾಮದ ನಕ್ಷೆಯಲ್ಲಿ ಯಾವ ಭಾಗಗಳನ್ನು ಪರಿವರ್ತಿಸಬೇಕೆಂದು ಒದಗಿಸಿರುತ್ತಾರೆ. ಹಾಗಿದ್ದರೆ ಹಿಂಬರಹದಲ್ಲಿ ಯಾವ ಅಧಿಕೃತ ದಾಖಲೆಗಳನ್ನು ಸಲ್ಲಿಸಿಲ್ಲವೆಂದು ನಮೂದುಪಡಿಸಿರುವುದಿಲ್ಲ. ಹಾಗಿದ್ದಲ್ಲಿ ಮತ್ತೆ ಅರ್ಜಿದಾರರಿಂದ ಯಾವ ಯಾವ ಅಗತ್ಯ ಹಾಗೂ ಸಮಾಧಾನಕರ ದಾಖಲಾತಿಗಳ ಆಧಾರದ ಮೇಲೆ ಅಧಿಕೃತ ಜ್ಞಾಪನ ಪತ್ರವನ್ನು ಆರೋಪಿತ ಅಧಿಕಾರಿಯು ನೀಡಿದರು ಎಂಬ ಬಗ್ಗೆ ಯಾವುದೇ ಸಮಾಧಾನಕರವಾದ ಉತ್ತರವನ್ನು ಈ ವಿಚಾರಣೆಯಲ್ಲಿ ನೀಡಿರುವುದಿಲ್ಲ. ಆದರೆ ಆರೋಪಿತ ಅಧಿಕಾರಿಯವರು ತನ್ನ ಲಿಖಿತ ವಾದದಲ್ಲಿ ಆರೋಪ ಪಟ್ಟಿಯಲ್ಲಿ ನಮೂದಿಸಿರುವ ಸುತ್ತೋಲೆಯ ಬಗ್ಗೆ ಯಾವುದೇ ಸಾಕ್ಷಿ ನುಡಿದಿರುವುದಿಲ್ಲ. ಸದರಿ ಸಾಕ್ಷಿಯಿಂದ ಆರೋಪ ಸಾಬೀತಾಗಿಲ್ಲವೆಂದು ಹೇಳಿದ್ದಾರೆ. ಆದಾಗ್ಯೂ ಸರ್ಕಾರದಿಂದ ಹೊರಡಿಸಿದ ಸುತ್ತೋಲೆಗಳನ್ನು ಕಾರ್ಯನಿರ್ವಹಿಸುವ ಎಲ್ಲಾ ಸರ್ಕಾರಿ ನೌಕರರು ಹಾಗೂ ಅಧಿಕಾರಿಗಳು ಓದಿ ಪರಿಗಣಿಸಬೇಕಾದ್ದೂ ಆದ್ಯ ಕರ್ತವ್ಯ ಆಗಿರುತ್ತದೆ. ಈ ಬಗ್ಗೆ ಸಾಕ್ಷಿಗಳು ನುಡಿಯಬೇಕಾಗಿದ್ದು ಅನವಶ್ಯಕ. ನನ್ನ

ಅಭಿಪ್ರಾಯದಲ್ಲಿ ಕಾಯ್ದೆ, ಕಾನೂನು, ನಿಯಮ ಹಾಗೂ ಸುತ್ತೋಲೆಗಳನ್ನು ಕಡ್ಡಾಯವಾಗಿ ಪರಿಶೀಲಿಸಿದ ನಂತರವೇ ಸಾಂದರ್ಭಿಕವಾದ ಅಧಿಕೃತ ಜ್ಞಾಪನ ಪತ್ರಗಳನ್ನು ಹೊರಡಿಸತಕ್ಕದ್ದು. ಆಗ ಅವು ಕಾನೂನು ಬದ್ಧವಾಗಿರುತ್ತದೆಯೆಂದು ಹೇಳಬೇಕಾಗುವುದು. ಹಾಗಿಲ್ಲದಿದ್ದಲ್ಲಿ ಅಂತಹ ಅಧಿಕೃತ ಜ್ಞಾಪನ ಪತ್ರ ಹೋಗಿ ಅನಧಿಕೃತ ಜ್ಞಾಪನ ಪತ್ರವಾಗಿ ಬಿಡುತ್ತದೆ. ಅಂದರೆ ಕಾನೂನು ಬಾಹಿರವಾಗಿರುತ್ತದೆಂದು ಹೇಳಬಯಸುತ್ತೇನೆ. ಸದರಿ ಜಮೀನುಗಳ ಭೂ ಪರಿವರ್ತನೆಯನ್ನು ಭೂ ಸುಧಾರಣಾ ಕಾಯ್ದೆಯ ಕಲಂ 66, 79-ಎ ಮತ್ತು 79-ಬಿ ಯನ್ನು ಉಲ್ಲಂಘಿಸಿ ಮಾಡಿರುವುದರ ಜೊತೆಗೆ ನಗರ ಯೋಜನಾ ಇಲಾಖೆಯಿಂದ ಅನುಮತಿ ಪಡೆದಿರುವುದಿಲ್ಲ. ಹಾಗೂ ಸರ್ಕಾರದ ಸುತ್ತೋಲೆಗಳನ್ನು ಪರಿಪಾಲಿಸದೆ ಬದಿಗೊತ್ತಿ ಬೇಜವಬ್ದಾರಿಯಿಂದ ಕಾರ್ಯನಿರ್ವಹಿಸಿದ್ದು ಜೊತೆಗೆ ಲಿಖಿತ ಹೇಳಿಕೆಯನ್ನು ಸಲ್ಲಿಸಲು ಅವಕಾಶ ಕೊಟ್ಟಿದ್ದರೂ ಸಲ್ಲಿಸದಿರುವುದು ಆರೋಪಿತ ಅಧಿಕಾರಿಯ ಉದ್ದಟತನವಾಗಿರುತ್ತದೆಯೆಂದು ಭಾವಿಸಬೇಕಾಗಿರುತ್ತದೆ. ಹೀಗಾಗಿ ಅವರ ವಿರುದ್ಧದ 3 ಆರೋಪಗಳು ಸಾಬೀತಾಗಿರುತ್ತವೆ.

ಮೇಲ್ಕಂಡ ವಿಚಾರಣಾ ವರದಿಯನ್ನು ಪರಿಶೀಲಿಸಲಾಯಿತು. ಹಾಗೂ ಶ್ರೀ ಭಕ್ತರಾಮೇಗೌಡ ಅವರಿಗೆ ಮೇಲೆ (3)ರಲ್ಲಿ ಓದಲಾದ ದಿನಾಂಕ: 30.04.2003ರ ಎರಡನೇ ಕಾರಣ ಕೇಳುವ ನೋಟೀಸ್‌ನೊಡನೆ ವಿಚಾರಣೆ ವರದಿಯನ್ನು ಒದಗಿಸಿ ಆ ಬಗ್ಗೆ ಏನಾದರೂ ಅಹವಾಲು ಇದ್ದಲ್ಲಿ ಸಲ್ಲಿಸಲು ಅವಕಾಶ ಕಲ್ಪಿಸಲಾಯಿತು. ಆರೋಪಿಯು ಈ ನೋಟೀಸ್‌ಗೆ ಮೇಲೆ (4)ರಲ್ಲಿ ಓದಲಾದ ದಿನಾಂಕ: 21.06.2003ರ ಉತ್ತರ ಸಲ್ಲಿಸಿ ಭೂ ಪರಿವರ್ತನಾ ಅರ್ಜಿಗಳನ್ನು ಅರ್ಜಿದಾರರಿಂದ ದಿನಾಂಕ: 31.07.1989, 27.08.1990 ಹಾಗೂ 07.11.1990ರಂದು ಸ್ವೀಕರಿಸಲಾಗಿದ್ದು ಭೂ ಕಂದಾಯ ನಿಯಮಗಳ ಅನ್ವಯ ಸದರಿ ಭೂ ಪರಿವರ್ತನಾ ಅರ್ಜಿಗಳನ್ನು ಪರಿಶೀಲಿಸಿ ಕಡತ ಮಂಡಿಸುವಂತೆ ರಾಜಸ್ವ ನಿರೀಕ್ಷಕರಿಗೆ ನೀಡಲಾಯಿತು. ಅವರು ನಿಯಮಾನುಸಾರ ಪರಿಶೀಲಿಸಿ ಶಿಫಾರಸ್ಸು ಮಾಡಿರುವ ಮೇರೆಗೆ ಹಾಗೂ ತಾಲ್ಲೂಕು ಕಛೇರಿಯಲ್ಲಿ ಲಭ್ಯವಿರುವ ದಾಖಲೆಗಳನ್ನು ಪರಿಶೀಲಿಸಿ ಮೇಲಿನ ಜಮೀನುಗಳಲ್ಲಿ ಗೇಣಿ ಪ್ರಕರಣಗಳು ದಾಖಲಾಗಿಲ್ಲದೇ ಇರುವುದರಿಂದ ಭೂ ಸುಧಾರಣಾ ಅಧಿನಿಯಮದ ಉಲ್ಲಂಘನೆಯಾಗುವುದಿಲ್ಲವೆಂದು ಖಚಿತಪಡಿಸಿಕೊಂಡು ಹಾಗೂ ಈ ಜಮೀನುಗಳು ಸರ್ಕಾರದಿಂದ ಪರಿಶಿಷ್ಟ ಪಂಗಡ ಮತ್ತು ಜಾತಿಯವರಿಗೆ ಮಂಜೂರಾತಿಯಾಗಿರುವ ಜಮೀನುಗಳಲ್ಲ ಎಂಬುದನ್ನು ಖಚಿತಪಡಿಸಿಕೊಂಡು ಭೂ ಕಂದಾಯ ಅಧಿನಿಯಮದ ಸೆಕ್ಷನ್ 95(4) ನಗರ ಯೋಜನೆ ಕಾಯ್ದೆಯನ್ನು ಹಾಗೂ ಕಟ್ಟಡ ನಿರ್ಮಾಣದ ಮುನ್ನ ನಿಯಮಿತ ಕಾಯ್ದೆಗಳನ್ನು ಪಾಲಿಸುವ ಷರತ್ತುಗಳನ್ನು ವಿಧಿಸಿ ಭೂ ಪರಿವರ್ತನಾ ಆದೇಶವನ್ನು ಹೊರಡಿಸಲಾಗಿರುತ್ತದೆ. ಈ ಭೂ ಪರಿವರ್ತನಾ ಆದೇಶಗಳು ಭೂ ಕಂದಾಯ ಅಧಿನಿಯಮ: ಸುತ್ತೋಲೆಗಳ ವಿರುದ್ಧ ಇದ್ದಲ್ಲಿ ಅವುಗಳನ್ನು ರದ್ದುಪಡಿಸಲು ಕಂದಾಯ ಅಧಿಕಾರಿಗಳಿಗೆ ಅವಕಾಶ ಕಲ್ಪಿಸಲಾಗಿದ್ದರೂ ಸಹ ಅವುಗಳನ್ನು ರದ್ದುಪಡಿಸದೇ ಇರುವುದರಿಂದ ಹಾಗೂ ಈ ಆದೇಶಗಳು ನಿಯಮಾನುಸಾರ ಇದ್ದು ಸದುದ್ದೇಶದಿಂದ ಕೂಡಿರುವುದರಿಂದ ಮತ್ತು ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗದೇ ಇರುವುದರಿಂದ ಇಂತಹ ಕ್ರಮಗಳಿಗೆ ರಕ್ಷಣೆ ಒದಗಿಸುವುದು ಸರ್ಕಾರದ ಜವಾಬ್ದಾರಿಯಾಗಿರುವ ಮೇರೆಗೆ ಈ ಎಲ್ಲಾ ಅಂಶಗಳನ್ನು ಗಣನೆಗೆ ತೆಗೆದುಕೊಂಡು ತಮ್ಮನ್ನು ಆರೋಪಮುಕ್ತರನ್ನಾಗಿಸುವಂತೆ ಕೋರಿರುತ್ತಾರೆ.

ಆರೋಪಿಯ ಉತ್ತರವನ್ನು ವಿಚಾರಣಾ ವರದಿ ಹಾಗೂ ದಾಖಲೆಗಳೊಡನೆ ಮತ್ತೆ ಪರಿಶೀಲಿಸಲಾಗಿದೆ. ದೇವನಹಳ್ಳಿ ತಾಲ್ಲೂಕು ತಹಶೀಲ್ದಾರರು 13.11.1989ರಲ್ಲಿ ಅವಶ್ಯ ದಾಖಲಾತಿಗಳಲ್ಲದ ಕಾರಣ ಭೂ ಅನ್ಯಕ್ರಾಂತ ಕೋರಿಕೆಯನ್ನು ನಿರಾಕರಿಸಿದ್ದಾಗ ಹಿಂದೆ ಸಲ್ಲಿಸಿದ್ದ ಅರ್ಜಿಯನ್ನೇ ಮತ್ತೊಮ್ಮೆ ದಿನಾಂಕ: 20.12.1989ರಂದು ಅದೇ ಅರ್ಜಿದಾರರು ಸಲ್ಲಿಸಿದಾಗ ಅದನ್ನು ಆರೋಪಿಯು ಅಂಗೀಕರಿಸುವ ಅವಶ್ಯಕತೆ ಇರಲಿಲ್ಲ. ಯಾವ ದಾಖಲೆಗಳನ್ನು ಹೊಸದಾಗಿ ಸಲ್ಲಿಸಲಾಗಿದೆ ಎಂಬುದನ್ನು ನಮೂದಿಸದೇ ಅನ್ಯಕ್ರಾಂತಕ್ಕೆ ಅನುಮತಿಯನ್ನು ಆರೋಪಿಯು ನೀಡಿರುವುದು ವಿಚಾರಣಾ ವರದಿಯಲ್ಲಿ ಸ್ಪಷ್ಟವಾಗಿ ಮೂಡಿದೆ. ಎರಡನೇ ನೋಟೀಸ್‌ಗೆ ಆರೋಪಿಯು ನೀಡಿದ ಉತ್ತರದಲ್ಲಿ ಈ ಅಂಶವನ್ನು ವಿವರಿಸಿಯೇ ಇಲ್ಲ. ಆದ್ದರಿಂದ ಆರೋಪ ಸಾಬೀತಾಗಲು ಮೂಲ ಕಾರಣವಾದ ಈ ಅಂಶಕ್ಕೆ ವಿಭಿನ್ನವಾದ ಯಾವ ಮಾಹಿತಿಯೂ ಉತ್ತರದಲ್ಲಿ ಕಂಡು ಬರುತ್ತಿಲ್ಲ. ಆರೋಪಿಯು ಆರೋಪಮುಕ್ತರನ್ನಾಗಿಸಲು ಕೋರುತ್ತಿದ್ದರೂ ಸಹ ಅವರು ಕೋರಿಕೆಗೆ ಯಾವುದೇ ಸಮರ್ಥನೆಯನ್ನು ನೀಡದೇ ಇರುವುದರಿಂದ ಅವರ ಉತ್ತರವು ಸ್ವೀಕಾರಾರ್ಹವಲ್ಲವೆಂದು ನಿರ್ಣಯಿಸಲ್ಪಟ್ಟಿದೆ. ಯಾವುದೇ ಹೊಸ ಅಂಶಗಳಿಂದ ಕೂಡಿರದ ಅವರ ಉತ್ತರವನ್ನು ಒಪ್ಪದೇ ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡ ಸರ್ಕಾರವು ದಂಡನೆ ವಿಧಿಸಲು ನಿರ್ಧರಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಕ್ರಮಾಂಕ: ಸಿಆಸುಇ 52 ಎಸ್‌ಇಎನ್ 97, ಬೆಂಗಳೂರು, ದಿನಾಂಕ:13ನೇ ಅಕ್ಟೋಬರ್, 2003**

ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 8(iv-ಎ)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಭಕ್ತರಾಮೇಗೌಡ, ಕೆಎಎಸ್ (ಕಿರಿಯ ಶ್ರೇಣಿ) ಅಧಿಕಾರಿ ಅವರ ವೇತನವನ್ನು ವೇತನ ಶ್ರೇಣಿ 8000-200-8800-260-10880-320-13440ರಲ್ಲಿ ತಕ್ಷಣ ಜಾರಿಗೆ ಬರುವಂತೆ ಹಾಗೂ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಭಾದಕವಾಗದಂತೆ ರೂ. 10620ಕ್ಕೆ ಇಳಿಸುತ್ತದೆ.

ದಂಡನೆ ಅವಧಿಯಲ್ಲಿ ಅವರ ವೇತನವು ಸ್ಥಿರವಾಗಿರುತ್ತದೆ. ಈ ದಂಡನೆಯು ಅವರ ಮುಂದಿನ ವಾರ್ಷಿಕ ವೇತನ ಬಡ್ತಿಗೆ ಭಾದಕವಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1345 ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ (ಸೇವೆಗಳು-3).

## ಕಂದಾಯ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಕಂಇ 41 ಮುನೋಸೊ 2000, ಬೆಂಗಳೂರು, ದಿನಾಂಕ: 29ನೇ ಸೆಪ್ಟೆಂಬರ್, 2003**

ಸರ್ಕಾರಿ ಆದೇಶ ಸಂಖ್ಯೆ: ಕಂಇ 41 ಮುನೊಸೊ 2000, ದಿನಾಂಕ:06.08.2003ರ ಆದೇಶದಲ್ಲಿ ಪ್ರಸ್ತಾವನೆ ಕಂಡಿಕೆಯಲ್ಲಿ ಸಂಸ್ಥೆಯು ಕಳೆದ 3 ವರ್ಷಗಳಿಂದ ಸರ್ವಸದಸ್ಯರ ಸಭೆ ನಡೆಸದೇ ಇರುವುದು ಎನ್ನುವ ಬದಲಾಗಿ ಸಂಸ್ಥೆಯು ದೀರ್ಘ ಕಾಲದಿಂದ ಸರ್ವ ಸದಸ್ಯರ ಸಭೆ ನಡೆಸದೇ ಇರುವುದು ಎಂದು ಓದಿ ಕೊಳ್ಳತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಸಿ. ಚನ್ನೇಗೌಡ**
ಪೀಠಾಧಿಕಾರಿ,
ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ).

ಪಿ.ಆರ್. 1346

## DEPARTMENT OF DISINVESTMENT AND STATE PUBLIC ENTERPRISES REFORMS SECRETARIAT

**Sub:** Authorising of officers for opening of tenders, under Karnataka Transparency in Public Procurement Act, 1999 for procuring services of Advisor for disinvestment of PSEs under P.E. Reforms.

Under section 11 of KTPP act, the procurement entity may authorise either the Tender Inviting Authority or the Tender Accepting Authority or any other Officer to open the Tenders and draw-up a list of Tenders responding to the notice inviting Tender, in each case. Therefore it is decided to authorize the committee of the following two officers as tender opening officers.

Hence this order.

**Government Order No. DDPER 21 ARU 2003, Bangalore, Dated:14th October, 2003**

In the circumstances explained above the Government is pleased to authorise the committee of the following officers.

a) The Director and Ex-Officio Secretary to Government, DDPER and
b) Additional Director and Ex-Officio Joint Secretary to Government, DDPER, as Tender Opening Officers.

By Order and in the name of the Governor of Karnataka,
**B.K. GOPALA**
Administrative Officer and Ex-officio
Under Secretary to Government,
DDPER.

PR-1347

## ಕಾನೂನು ಸಚಿವಾಲಯ

**ವಿಷಯ:** ಶ್ರೀ ವಿ.ಬಿ. ನಾಯಕ್, 1ನೇ ಅಪರ ಸರ್ಕಾರಿ ಅಭಿಯೋಜಕರು, ಮೈಸೂರು, ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಗಳನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 120 ಪಿಪಿಇ 98, ದಿನಾಂಕ: 20.03.03.
2) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಪತ್ರ ಸಂಖ್ಯೆ: ಡಿಪಿಎನ್:ಅದಾ:04:98-99 ದಿನಾಂಕ: 16.07.03.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಶ್ರೀ ವಿ.ಬಿ. ನಾಯಕ್, 1ನೇ ಅಪರ ಸರ್ಕಾರಿ ಅಭಿಯೋಜಕರು, ಮೈಸೂರು ಇವರ ವಿರುದ್ಧದ ಆರೋಪಗಳ ಬಗ್ಗೆ ವಿಚಾರಣೆ ನಡೆಸಲು ಶ್ರೀ ವಿ.ಹೆಚ್. ಉಪಾಧ್ಯಾಯ, ನಿವೃತ್ತ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿಯು ಹಾಗೂ ಶ್ರೀ ಎ.ವಿ. ದೇಶಪಾಂಡೆ, ಜಂಟಿ ಅಭಿಯೋಗ ನಿರ್ದೇಶಕರು (ಆಡಳಿತ) ಇವರನ್ನು ಮಂಡನಾಧಿಕಾರಿಯನ್ನಾಗಿಯೂ ನೇಮಿಸಲಾಗಿತ್ತು. ಆದರೆ ಮೇಲೆ (2)ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ ಶ್ರೀ ಎ.ವಿ. ದೇಶಪಾಂಡೆ, ಅಭಿಯೋಗ ಉಪ ನಿರ್ದೇಶಕರು, ಇವರು ಗುಲ್ಬರ್ಗಕ್ಕೆ ವರ್ಗಾವಣೆಯಾದ ಪ್ರಯುಕ್ತ, ಸದರಿ ಅಧಿಕಾರಿಯು ನಿರ್ವಹಿಸಬೇಕಾಗಿದ್ದ ಮಂಡನಾಧಿಕಾರಿಯ ಕರ್ತವ್ಯಗಳನ್ನು ಶ್ರೀ ಎಲ್.ಎ. ಜವಳಿ, ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರು ನಿರ್ವಹಿಸಲು ನೇಮಿಸಬೇಕೆಂದು ಕೋರಿರುವರು. ಆದ್ದರಿಂದ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಲಾ 120 ಪಿಪಿಇ 98, ಬೆಂಗಳೂರು, ದಿನಾಂಕ: 24ನೇ ಸೆಪ್ಟೆಂಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನಲೆಯಲ್ಲಿ ಶ್ರೀ ಎಲ್.ಎ. ಜವಳಿ ಅಭಿಯೋಗ ಉಪ ನಿರ್ದೇಶಕರು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ಇವರನ್ನು ಸರ್ಕಾರಿ ಆದೇಶ ಸಂಖ್ಯೆ: ಲಾ 120 ಪಿಪಿಇ 98 ದಿನಾಂಕ: 20.03.03ರಲ್ಲಿ ಶ್ರೀ ವಿ.ಬಿ. ನಾಯಕ್ ಸರ್ಕಾರಿ ಅಭಿಯೋಜಕರು, ಮೈಸೂರು ಇವರ ವಿರುದ್ಧ ಆದೇಶಿಸಿರುವ ಇಲಾಖಾ ವಿಚಾರಣೆ ನಡೆಸಲು ಮಂಡನಾಧಿಕಾರಿಯನ್ನಾಗಿ ನೇಮಿಸಿದೆ. ಸರ್ಕಾರಿ ಆದೇಶ ಸಂಖ್ಯೆ: ಲಾ 120 ಪಿಪಿಇ 98 ಬೆಂಗಳೂರು, ದಿನಾಂಕ: 20.03.03ರಲ್ಲಿನ ಷರತ್ತುಗಳಲ್ಲಿ ಯಾವುದೇ ಬದಲಾವಣೆ ಇಲ್ಲ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶ್ರೀಧರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಕಾನೂನು ಇಲಾಖೆ (ಆಡಳಿತ-2).

ಪಿ.ಆರ್. 1348

## ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಸಚಿವಾಲಯ

**ವಿಷಯ:** ಶ್ರೀಮತಿ ಎನ್. ಜಯಲಕ್ಷ್ಮಮ್ಮ, ಭಾಷಾಂತರಕಾರರು (ಕನ್ನಡ) ಇವರಿಗೆ ಹಿರಿಯ ವೇತನ ಶ್ರೇಣಿಯಲ್ಲಿ ಸ್ವಯಂಚಾಲಿತ ವಿಶೇಷ ಬಡ್ತಿ ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**
1) ಭಾಷಾಂತರ ನಿರ್ದೇಶಕರ ಪ್ರಸ್ತಾವನೆ ಭಾನಿ 28; ಆಡಳಿತ: ಸ್ವವಿಭ:2003, ದಿನಾಂಕ: 19.09.2003.
2) ಅಧಿಸೂಚನೆ ಸಂಖ್ಯೆ: ಎಫ್‌ಡಿ 25 ಎಸ್‌ಆರ್‌ಪಿ 91, ದಿನಾಂಕ: 29.10.91.
[The Karnataka Civil Services (Automatic Grant of Special promotion to Senior Scale of Pay) Rules, 1991]

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾಗಿರುವ ಪ್ರಸ್ತಾವನೆಯಲ್ಲಿ ಶ್ರೀಮತಿ ಎನ್. ಜಯಲಕ್ಷ್ಮಮ್ಮ, ಭಾಷಾಂತರಕಾರರು (ಕನ್ನಡ) ಇವರಿಗೆ The Karnataka Civil Service (Automatic Grant of Special promotion to Senior Scale of Pay) Rules, 1991ರ 3ನೇ ನಿಯಮದನ್ವಯ ದಿನಾಂಕ: 27.07.2002ರಿಂದ ವೇತನ ಶ್ರೇಣಿ ರೂ. 5575-10620ರಿಂದ ವೇತನ ಶ್ರೇಣಿ ರೂ. 6000-11200ಕ್ಕೆ ಸ್ವಯಂಚಾಲಿತ ವಿಶೇಷ ಬಡ್ತಿ ಮಂಜೂರಾತಿಯ ಬಗ್ಗೆ ಕ್ರಮ ತೆಗೆದುಕೊಳ್ಳಲು ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ದಿನಾಂಕ: 24.09.2003ರ ಇಲಾಖಾ ಮುಂಬಡ್ತಿ ಸಮಿತಿ ಸಭೆಯಲ್ಲಿ ಪರಿಶೀಲಿಸಲಾಗಿದೆ. ಸದರಿಯವರು ಸ್ವಯಂಚಾಲಿತ ವಿಶೇಷ ಬಡ್ತಿ ಪಡೆಯಲು ಅರ್ಹತೆ ಹೊಂದಿರುವುದಾಗಿ ಇಲಾಖಾ ಮುಂಬಡ್ತಿ ಸಮಿತಿಯು ನಿರ್ಣಯಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಸಂವ್ಯಶಾಇ 49 ಭಾನಿವಿ 2003, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್, 2003**

ಶ್ರೀಮತಿ ಎನ್. ಜಯಲಕ್ಷ್ಮಮ್ಮ, ಭಾಷಾಂತರಕಾರರು (ಕನ್ನಡ) ಇವರಿಗೆ ಕರ್ನಾಟಕ ಸಿವಿಲ್ ಸೇವಾ (ಹಿರಿಯ ವೇತನ ಶ್ರೇಣಿ ಸ್ವಯಂಚಾಲಿತ ವಿಶೇಷ ಬಡ್ತಿ ಮಂಜೂರಾತಿ) ನಿಯಮಗಳು, 1991ರನ್ವಯ ವೇತನ ಶ್ರೇಣಿ ರೂ. 5575-10620 ರಿಂದ ವೇತನ ಶ್ರೇಣಿ ರೂ. 6000-11200ಕ್ಕೆ ಸ್ವಯಂಚಾಲಿತ ವಿಶೇಷ ಬಡ್ತಿಯನ್ನು ದಿನಾಂಕ: 27.07.2002ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲಾಗಿದೆ. ಅಂದಿನಿಂದ ಜಾರಿಗೆ ಬರುವಂತೆ ಇವರ ವೇತನವನ್ನು ಸದರಿ ನಿಯಮಗಳ ನಿಯಮ 7ರನ್ವಯ ನಿಗದಿಪಡಿಸಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ರಿಚಾರ್ಡ್‌ಲೋಬೊ**
ಸಹಾಯಕ ಪ್ರಾರೂಪಕಾರ ಮತ್ತು ಪದನಿಮಿತ್ತ
ಸರ್ಕಾರದ ಅಧೀನ ಕಾರ್ಯದರ್ಶಿ,
ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಇಲಾಖೆ.

ಪಿ.ಆರ್. 1349

## ಕಾನೂನು ಸಚಿವಾಲಯ

**ವಿಷಯ:** ಶ್ರೀಮತಿ ರಮಾ ಬಿ. ದರ್‌ಬಾರ್, ನೋಟರಿ, ಬಿಜಾಪುರ ಇವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದು ಹಾಕುವ ಬಗ್ಗೆ ಆದೇಶ.

**ಓದಲಾಗಿದೆ:**
1) ಸರ್ಕಾರಿ ಆದೇಶ ಸಂಖ್ಯೆ: ಲಾ 343 ಎಲ್‌ಸಿಎಲ್ 98, ದಿನಾಂಕ: 14.12.98.
2) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರ ಪತ್ರ ದಿನಾಂಕ: 01.03.2002.
3) ಸರ್ಕಾರಿ ಆದೇಶ ಸಂಖ್ಯೆ: ಲಾ 178 ಎಲ್‌ಸಿಎಲ್ 99, ದಿನಾಂಕ: 08.12.99.
4) ಸರ್ಕಾರಿ ಸಮ ಸಂಖ್ಯೆ: ಪತ್ರಗಳು ದಿನಾಂಕ: 23.02.01; 23.04.02 ಮತ್ತು 30.08.02.
5) W.P. 18784:2002 ದಿನಾಂಕ: 18.04.2002.
6) ದಿನಾಂಕ: 07.09.02ರ ನೋಟರಿಯವರ ಮನವಿ.
7) ಸರ್ಕಾರಿ ಆದೇಶ ಸಂಖ್ಯೆ: ಲಾ 123 ಎಲ್‌ಸಿಎಲ್ 02, ದಿನಾಂಕ: 01.01.2003.
8) ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರ ಪತ್ರ ದಿನಾಂಕ: 05.04.03.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ (1) ದಿನಾಂಕ: 14.12.98ರ ಸರ್ಕಾರಿ ಆದೇಶ ಸಂಖ್ಯೆ: ಲಾ 343 ಎಲ್‌ಸಿಎಲ್ 98ರಲ್ಲಿ ಶ್ರೀಮತಿ ರಮಾ ಬಿ. ದರ್‌ಬಾರ್ ಇವರನ್ನು ಬಿಜಾಪುರಕ್ಕೆ ನೋಟರಿಯಾಗಿ ನೇಮಿಸಿ ದಿನಾಂಕ: 01.03.99 ರಿಂದ ನೋಟರಿಯಾಗಿ ಕರ್ತವ್ಯ ನಿರ್ವಹಿಸುವಂತೆ ವೃತ್ತಿ ಪ್ರಮಾಣ ಪತ್ರ ನೀಡಲಾಗಿದೆ. ಸದರಿ ನೋಟರಿಯವರು 3 ವರ್ಷಗಳ ನಂತರ ವೃತ್ತಿ ಪ್ರಮಾಣ ಪತ್ರವನ್ನು ನವೀಕರಿಸಿಕೊಳ್ಳಬೇಕಿರುತ್ತದೆ. ದಿನಾಂಕ: 29.02.2002ಕ್ಕೆ ವೃತ್ತಿ ಪ್ರಮಾಣ ಪತ್ರದ ಅವಧಿ ಅಂತ್ಯಗೊಳ್ಳುತ್ತದೆ. ಮೇಲೆ ಓದಲಾದ ಕ್ರಮಾಂಕ (2) ದಿನಾಂಕ: 01.03.2002ರಲ್ಲಿ ವೃತ್ತಿ ಪ್ರಮಾಣ ಪತ್ರವನ್ನು ದಿನಾಂಕ: 01.03.2002ರಿಂದ ನವೀಕರಿಸುವಂತೆ ಕೋರಿ ಪ್ರಸ್ತಾವನೆ ಸಲ್ಲಿಸಿರುತ್ತಾರೆ ಮತ್ತು ಸದರಿ ನೋಟರಿಯವರು ನವೀಕರಣ ಪ್ರಸ್ತಾವನೆಯನ್ನು 05.02.02ರಂದು ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ. ಆದರೆ ಸದರಿ ಪ್ರಸ್ತಾವನೆಯು ಸರ್ಕಾರದ ಹಂತದಲ್ಲಿ ಸ್ವೀಕೃತವಾಗಿರುವುದಿಲ್ಲ. ಆದರೆ ನವೀಕರಣ ಪ್ರಮಾಣ ಪತ್ರ ಸ್ವೀಕೃತವಾಗಿಲ್ಲವೆಂದು ಉಚ್ಚ ನ್ಯಾಯಾಲಯದಲ್ಲಿ W.P.18784:2002ನ್ನು ದಾಖಲಿಸಿರುತ್ತಾರೆ.

ಕೆಲವೊಂದು ಸಾರ್ವಜನಿಕರಿಂದ ನೋಟರಿಯವರ ವಿರುದ್ಧ ದೂರುಗಳು ದಾಖಲಾಗಿದ್ದು ಅದರ ಬಗ್ಗೆ ವಿಚಾರಣೆ ನಡೆಸಿ ವಿಚಾರಣಾ ವರದಿ ನೀಡುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬಿಜಾಪುರ ಇವರನ್ನು ಮೇಲೆ ಓದಲಾದ ಕ್ರಮಾಂಕ (3)ರ ಸರ್ಕಾರಿ

ಆದೇಶ ಲಾ 178 ಎಲ್‌ಸಿಎಲ್ 99, ದಿನಾಂಕ:08.12.99ರಲ್ಲಿ ವಿಚಾರಣಾಧಿಕಾರಿಗಳನ್ನಾಗಿ ನೇಮಿಸಲಾಗಿದೆ ಹಾಗೂ ಮೇಲೆ ಓದಲಾದ (4)ರ ಸರ್ಕಾರಿ ಪತ್ರಗಳಲ್ಲಿ ತ್ವರಿತವಾಗಿ ವಿಚಾರಣಾ ವರದಿ ಸಲ್ಲಿಸುವಂತೆ ನೆನಪೋಲೆ ಸಹಾ ಹೊರಡಿಸಿದೆ.

ಮೇಲೆ ಕ್ರಮಾಂಕ (5)ರಲ್ಲಿ ಓದಲಾದ ರಿಟ್ ಪಿಟಿಷನ್ ಸಂಖ್ಯೆ: 18784:2002, ದಿನಾಂಕ: 18.04.2002ರಲ್ಲಿ ಉಚ್ಚ ನ್ಯಾಯಾಲಯವು To consider her application for renewal as exceditionsly as possible. In the instant case, as it has not been considered it is a fit case to issue direction ಎಂದು ಆದೇಶಿಸಿರುವ ಹಿನ್ನೆಲೆಯಲ್ಲಿ ಮೇಲೆ ಓದಲಾದ ಕ್ರಮಾಂಕ (6)ರಲ್ಲಿ ಮನವಿ ದಿನಾಂಕ: 07.09.02ರಲ್ಲಿ ನೋಟರಿಯವರು ಹೊಸದಾಗಿ ನವೀಕರಣ ಶುಲ್ಕ ಪಾವತಿಸಿ ಮೂಲ ಚಲಾನ್‌ನೊಂದಿಗೆ ಸಂಬಂಧಿತ ಅಡಕಗಳನ್ನು ಸಲ್ಲಿಸಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ (7) ಸರ್ಕಾರಿ ಆದೇಶ ಲಾ 123 ಎಲ್‌ಸಿಎಲ್ 02, ದಿನಾಂಕ: 01.01.2003ರಲ್ಲಿ ಉಚ್ಚನ್ಯಾಯಾಲಯವು ರಿಟ್ ಪಿಟಿಷನ್ ಮೇಲೆ ನೀಡಿದ ಆದೇಶಾನುಸಾರ ಸದರಿ ನೋಟರಿಯವರ ವೃತ್ತಿ ಪ್ರಮಾಣಪತ್ರವನ್ನು ಅವರಿಗೆ ಅನ್ವಯಿಸುವ ದಿನಾಂಕದಿಂದ ನವೀಕರಿಸಬಹುದಾಗಿದೆ ಎಂದು ಆದೇಶಿಸಿ ಆದೇಶ ಹೊರಡಿಸಿದೆ.

ಮೇಲೆ ಓದಲಾದ ಕ್ರಮಾಂಕ (8)ರಲ್ಲಿ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಿಜಾಪುರ ಇವರು ದಿನಾಂಕ: 01.01.2002 ರಿಂದ 31.12.2002ರವರೆಗೆ ನೋಟರಿಯವರ ರಿಜಿಸ್ಟರ್‌ಗಳನ್ನು ತಪಾಸಣೆ ನಡೆಸಿ ಕ್ರಮಬದ್ಧವಿರುವುದಾಗಿ ಮತ್ತು ನಿರ್ವಹಿಸಿದ ಕರ್ತವ್ಯಗಳನ್ನು ನಮೂದಿಸಿರುವುದಾಗಿ ವರದಿ ನೀಡಿರುತ್ತಾರೆ.

ನೋಟರಿಯವರ ವೃತ್ತಿ ಪ್ರಮಾಣ ಪತ್ರದ ಅವಧಿಯು 29.02.02ಕ್ಕೆ ಅಂತ್ಯಗೊಂಡಿದ್ದು 01.03.2002ರಿಂದ ನವೀಕರಣ ಪ್ರಮಾಣ ಪತ್ರ ಪಡೆಯಬೇಕಿರುತ್ತದೆ. ನವೀಕರಣ ಪ್ರಮಾಣ ಪತ್ರ ಪಡೆಯದೆ ನೋಟರಿ ಕರ್ತವ್ಯ ನಿರ್ವಹಿಸಿ ನೋಟರಿ ಕಾಯ್ದೆ 9(1)ನ್ನು ಉಲ್ಲಂಘಿಸಿರುವುದು ರಿಜಿಸ್ಟರ್‌ಗಳ ತಪಾಸಣೆಯಿಂದ ದೃಢಪಟ್ಟಿರುತ್ತದೆ.

ಮೇಲಿನ ಎಲ್ಲಾ ಅಂಶಗಳನ್ನು ಪರಿಶೀಲಿಸಿ ಸರ್ಕಾರವು ಕೆಳಗಿನಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಲಾ 123 ಎಲ್‌ಸಿಎಲ್ 2002, ಬೆಂಗಳೂರು, ದಿನಾಂಕ:6ನೇ ಅಕ್ಟೋಬರ್, 2003**

ಶ್ರೀಮತಿ ರಮಾ ಬಿ. ದರ್‌ಬಾರ್, ನೋಟರಿ, ಬಿಜಾಪುರ ಇವರ ವೃತ್ತಿ ಪ್ರಮಾಣ ಪತ್ರದ ಅವಧಿಯು ದಿನಾಂಕ: 01.03.2002ಕ್ಕೆ ಅಂತ್ಯಗೊಂಡಿದ್ದು ನವೀಕರಣ ಪ್ರಮಾಣ ಪತ್ರ ಪಡೆಯದೆ ದಿನಾಂಕ: 01.01.2002 ರಿಂದ 31.12.2002ರವರೆಗೆ ನೋಟರಿ ಕರ್ತವ್ಯ ನಿರ್ವಹಿಸಿರುವುದು ನೋಟರಿ ರಿಜಿಸ್ಟರ್ ತಪಾಸಣಾ ವರದಿಯಿಂದ ದೃಢಪಟ್ಟಿದ್ದು ನೋಟರಿ ಕಾಯ್ದೆ 9(1)ನ್ನು ಉಲ್ಲಂಘಿಸಿರುವುದು ದೃಢ ಪಟ್ಟಿರುತ್ತದೆ. ಆದ್ದರಿಂದ ನೋಟರಿ ನಿಯಮಾವಳಿಗಳು 1956ರ ನಿಯಮ 13(ಬಿ) (1) ರೀತ್ಯ ಸದರಿ ನೋಟರಿಯವರ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಸ್. ಶ್ರೀಧರ್**
ಸರ್ಕಾರದ ಅಧೀನ ಕಾರ್ಯದರ್ಶಿ(ಪ್ರಭಾರ),
ಕಾನೂನು ಇಲಾಖೆ (ಆಡಳಿತ-2).

ಪಿ.ಆರ್. 1350

## FINANCE SECRETARIAT

**Sub:** Introduction of an Incentive Scheme for better enforcement of Karnataka Excise Act 1965 and the rules made thereunder.

**Preamble:**

The question of introducing a proper Incentive Scheme for better enforcement of Karnataka Excise Act 1965 and the rules made thereunder has been under the consideration of Government for quite some time. The principle behind this scheme is that a portion of the revenue accured to Government due to the concerted efforts of officers or others is parted as incentive, thereby motivating them to enforce the law.

Hence the order.

**Government Order No.FD 47 EAA 2003, Bangalore, Dated:11th September, 2003**

Government are pleased to introduce an Incentive Scheme for better enforcement of Karnataka Excise Act 1965 and the rules made thereunder, as detailed below.

1. **Persons eligible for the incentive amount:**

All Government employees, police officials and members of the public are eligible to receive the incentive amount payable as may be decided by the sanctioning authority in accordance with this scheme. If more than one person is eligible to receive the incentive amount payable, then the same shall be distributed amongst them, as may be ordered by the Excise Commissioner.

2. **Incentive amount payable:**

The maximum incentive amount payable under this scheme shall not exceed ten percent of the value of the excisable goods seized. However in respect of Government servants the amount shall be limited to Rs. 10.00 lakhs in their entire carreer. Value of excisable goods would imply the declared price of the manufacturer, and the Excise Duty and Additional Excise Duty payable on such goods. Incase of

goods for which no declared price is available, then the value of excisable goods would imply the price that the Karnataka State Beverages Corporation Limited would pay for sourcing such goods.

In case of any doubt regarding the value of excisable goods, the Excise Commissioner in consultation with the Managing Director of the Karnataka State Beverages Corporation shall declare such value and such declaration shall be final.

**3. Sanctioning authority:**

The Excise Commissioner shall be the authority empowered to sanction the incentive amount and the persons eligible to receive the same.

He may, at his discretion, sanction any amount not exceeding the maximum incentive amount payable, taking into account the quantum of seized goods, their value, the effort of the eligible persons in facilitating the seizure, etc. The decision of the Excise Commissioner in sanctioning the incentive amount payable shall be final.

The Excise Commissioner may also specify such procedure and documents to be maintained for identifying the persons eligible for receiving the incentive amount.

**4. Payment procedure:**

Payment of incentive amount to the eligible persons shall be made by the Karnataka State Beverages Corporation. While making such payment, the Beverages Corporation shall be at liberty to call for such documents that may be necessary to establish the identity of the persons eligible to receive the incentive amount.

**5. Accounting by the Corporation:**

Any incentive amount paid by the Corporation shall be seperately accounted for by it and particulars submitted to the Excise Commissioner and the Government every three months.

Such amount disbursed shall be treated as payment of interest and repayment of principal in respect of loans advanced by the Government to the Beverages Corporation. If no loan is outstanding, then the amounts disbursed shall be deemed to be advance payment of privilege fee levied by the Government under Section 24 of the Excise Act, 1965.

**6. Lapse of incentive amount sanctioned:**

If the incentive amount sanctioned by the Excise Commissioner is not claimed by the person eligible within twelve months from the date of sanction, then the sanction shall lapse. The Beverages Corporation shall not make any payment of such lapsed incentive amount, unless specifically authorised by the Government.

**8. Removal of doubts:**

Any doubt on the implementation of this scheme shall be referred to the Government.

**9. Commencement of the Scheme:**

This Scheme shall deemed to have been come into force from 01.08.2003.

By Order and in the name of the Governor of Karnataka,

**L. SREENIVASAN**

Under Secretary to Government,

Finance Department (Excise)

PR-1351

**ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಸಚಿವಾಲಯ**

**ವಿಷಯ:** ಬೆಂಗಳೂರಿನಲ್ಲಿರುವ ಸಮಾಜ ಸೇವಾ ಸಂಕೀರ್ಣಕ್ಕೆ ಪರಿವೀಕ್ಷಣಾಧಿಕಾರಿ ದರ್ಜೆ-II ಹುದ್ದೆಯನ್ನು ಸೃಜಿಸುವ ಬಗ್ಗೆ.

**ಓದಲಾಗಿದೆ:** ಪತ್ರಸಂಖ್ಯೆ:ನಿ.ಅಂಕಇ/ಯೋಜನೆ/50/2001-2002-1326, ದಿನಾಂಕ: 12.08.2002.

**ಪ್ರಸ್ತಾವನೆ:**

ಮೇಲೆ ಓದಲಾದ(1)ರ ದಿನಾಂಕ:12.08.2002 ಪತ್ರದಲ್ಲಿ ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆಯ ಅಧೀನದಲ್ಲಿರುವ ಸಮಾಜ ಸೇವಾ ಸಂಕೀರ್ಣ ಬೆಂಗಳೂರು ಸಂಸ್ಥೆಯಲ್ಲಿ ವೃದ್ದರು, ಅಬಲರು, ರೋಗಗ್ರಸ್ಥರು, ಬುದ್ಧಿಮಾಂದ್ಯರು ನಿವಾಸಿಗಳಾಗಿರುವುದರಿಂದ ಆಗಿಂದಾಗ್ಗೆ ಆಸ್ಪತ್ರೆಗೆ ದಾಖಲು ಮಾಡುವುದು ಮತ್ತು ಶುಶ್ರೂಷೆ ಮಾಡಬೇಕಾಗಿರುವುದರಿಂದ, ಹಾಗೂ ನಿವಾಸಿಗಳ ಹಿತದೃಷ್ಟಿಯಿಂದ 50 ನಿವಾಸಿಗಳಿಗೆ ಒಂದು ಪರಿವೀಕ್ಷಣಾಧಿಕಾರಿಯಂತೆ ಮಂಜೂರಾದ 100 ನಿವಾಸಿಗಳಿಗೆ ವೇತನ ಶ್ರೇಣಿ ರೂ. 5200-9560ರಲ್ಲಿ ಎರಡು ಪರಿವೀಕ್ಷಣಾಧಿಕಾರಿಗಳ ದರ್ಜೆ-II ಹುದ್ದೆಗಳನ್ನು ಸೃಜನೆ ಮಾಡಲು ಕೋರಿರುತ್ತಾರೆ.

**ಸರ್ಕಾರದ ಆದೇಶ ಸಂಖ್ಯೆ: ಮಮಅ:291:ಪಿಹೆಚ್‌ಪಿ: 2003, ಬೆಂಗಳೂರು, ದಿನಾಂಕ:1ನೇ ಅಕ್ಟೋಬರ್, 2003**

ನಿರ್ದೇಶಕರು, ಅಂಗವಿಕಲರ ಕಲ್ಯಾಣ ಇಲಾಖೆ, ಬೆಂಗಳೂರು ರವರ ಪ್ರಸ್ತಾವನೆಯನ್ನು ಪರಿಶೀಲಿಸಿದ ಸರ್ಕಾರವು ಅಂಗವಿಕಲರ ಕಲ್ಯಾಣ ಇಲಾಖೆಯಲ್ಲಿ ಒಂದು ಪರಿವೀಕ್ಷಣಾಧಿಕಾರಿ ಹುದ್ದೆಯನ್ನು ವೇತನ ಶ್ರೇಣಿ 5200-9560ರಲ್ಲಿ ಸೃಜಿಸಲು ಮಂಜೂರಾತಿ ನೀಡಿದೆ. ಈ ಹುದ್ದೆಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ, 2235-02-001-0-03ರಡಿ ಭರಿಸುವುದು.

ಈ ಆದೇಶವನ್ನು ಟಿಪ್ಪಣಿ ಸಂಖ್ಯೆ:ಆಇ/1304/ವೆಚ್ಚ-3/2003/ದಿನಾಂಕ:28.08.2003ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಪ್ರ.ದ. ಸಿದ್ದಾಂತಿ**

ಸರ್ಕಾರದ ಅಧೀನ ಕಾರ್ಯದರ್ಶಿ-1,

ಪಿ.ಆರ್. 1352 ಮಹಿಳಾ ಹಾಗೂ ಮಕ್ಕಳ ಅಭಿವೃದ್ಧಿ ಇಲಾಖೆ.

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಹರಪನಹಳ್ಳಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದ ಉಗ್ರಾಣ ಸಾಮಗ್ರಿಗಳ ದುರುಪಯೋಗಕ್ಕೆ ಸಂಬಂಧಿಸಿದಂತೆ ಅಧಿಕಾರಿ: ನೌಕರರ ಮೇಲೆ ಕರ್ನಾಟಕ ಸರ್ಕಾರಿ ಸೇವಾ (ವನಿಅ) ನಿಯಮಗಳು 1957ರನ್ವಯ ಇಲಾಖಾ ವಿಚಾರಣೆ-ಶ್ರೀ ಎಂ. ಕೇಶವಮೂರ್ತಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ಕಾರ್ಯಪಾಲಕ ಇಂಜಿನಿಯರ್ ಪ್ರಭಾರ), ಅವರ ಮೇಲಿನ ಆರೋಪಗಳಿಂದ ದೋಷಮುಕ್ತಗೊಳಿಸುವ ಬಗ್ಗೆ-ಆದೇಶ.

**ಓದಲಾಗಿದೆ:**
1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾಪಂಚಾಯತ್, ದಾವಣಗೆರೆ ಇವರ ಪತ್ರ ಸಂ:ಜಿಪಂದಾ:ಅ(3): ಸಿಸಿಎ:ಸಿಆರ್-8:2000-01 ದಿನಾಂಕ: 24.11.2000.
2. ಶ್ರೀ ಎಂ. ಕೇಶವಮೂರ್ತಿ, ಕಾರ್ಯಪಾಲಕ ಇಂಜಿನಿಯರ್(ಪ್ರಭಾರ), ಲೆಕ್ಕಾಧೀಕ್ಷಕರಾದ ಶ್ರೀ ಬಿ. ಯುನಸ್, ಶ್ರೀ ಇ. ಶಾಂತರಾಂ, ಶ್ರೀ ಗೌಸ್ ಮೊಯಿದ್ದೀನ್, ಕಾರ್ಯಪಾಲಕ ಇಂಜಿನಿಯರ್‌ರಾದ ಶ್ರೀ ಎಸ್.ಎ. ಪಾಟೀಲ್, ಶ್ರೀ ವೈ. ರುದ್ರಮುನಿ ಮತ್ತು ಶ್ರೀ ಮಂಜುನಾಥ, ದ್ವಿತೀಯ ದರ್ಜೆ ಉಗ್ರಾಣ ಪಾಲಕ ಇವರುಗಳ ದಿನಾಂಕ: 19.03.02, 15.03.01, 19.03.01, 19.03.02 26.03.02ರ ರಕ್ಷಣಾ ಹೇಳಿಕೆಗಳು.
3. ಆದೇಶ ಸಂಖ್ಯೆ: ಗ್ರಾಅಪ 44 ಇಎನ್‌ಕ್ಯೂ 2000 ದಿನಾಂಕ: 01.07.02.
4. ವಿಚಾರಣಾಧಿಕಾರಿಗಳ ದಿನಾಂಕ: 02.11.02ರ ವಿಚಾರಣಾ ವರದಿ.
5. ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ: ಗ್ರಾಅಪ 44 ಇಎನ್‌ಕ್ಯೂ 2000 ದಿನಾಂಕ: 30.04.03
6. ಆಪಾದಿತ ಅಧಿಕಾರಿ: ನೌಕರರಾದ ಶ್ರೀ ವೈ ರುದ್ರಮುನಿ, ಕಾಪಾಇಂ, ಶ್ರೀ ಎಂ. ಕೇಶವಮೂರ್ತಿ, ಕಾಇಂ (ಪ್ರಭಾರ), ಶ್ರೀ ಬಿ.ಕೆ. ಮಂಗಳಗಿ, ಪ್ರಥಮ ದರ್ಜೆ ಉಗ್ರಾಣ ಪಾಲಕ ಶ್ರೀ ಮಂಜುನಾಥ, ದ್ವಿತೀಯ ದರ್ಜೆ ಉಗ್ರಾಣಪಾಲಕ, ಲೆಕ್ಕಾಧೀಕ್ಷಕರಾದ ಶ್ರೀ ಗೌಸ್ ಮೊಯಿದ್ದೀನ್, ಶ್ರೀ ಬಿ. ಯುನಸ್, ಮತ್ತು ಶ್ರೀ ಇ. ಶಾಂತರಾಂ ಇವರುಗಳ ದಿನಾಂಕ: 05.07.03, 03.06.03, 18.06.03, 26.05.03, 19.03.03, 14.05.03 ಮತ್ತು 16.05.03ರ ರಕ್ಷಣಾ ಹೇಳಿಕೆಗಳು.
7. ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 44 ಇಎನ್‌ಕ್ಯೂ 2000 ದಿನಾಂಕ: 23.09.03.

**ಪ್ರಸ್ತಾವನೆ:**

ಹರಪನಹಳ್ಳಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಮಾರ್ಚ್ 1996ರಿಂದ ಜೂನ್ 1999ರ ಅವಧಿಯ ಉಗ್ರಾಣ ದಾಸ್ತಾನಿನ ದಾಖಲೆಗಳನ್ನು ಪರಿಶೀಲಿಸಿದಾಗ ಕಂಡುಬಂದ ಲೋಪಗಳು ದಾಸ್ತಾನು ಕೊರತೆಗೆ ಸಂಬಂಧಿಸಿದಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಾವಣಗೆರೆ ಇವರು ಲೆಕ್ಕ ಪರಿಶೋಧನಾ ತಂಡವನ್ನು ಕಳುಹಿಸಿ ಉಗ್ರಾಣದ ಲೆಕ್ಕಗಳ ಪರಿಶೋಧನೆ ಮಾಡಿಸಲಾಗಿ ಕಂಡುಬಂದ ಗಂಭೀರ ಅವ್ಯವಹಾರಗಳ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸಿದ್ದರು. ಸರ್ಕಾರವು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿಯವರ ವರದಿ ಹಾಗೂ ಈ ಬಗ್ಗೆ ಮಹಾಲೇಖಪಾಲರ ವರದಿಯನ್ನು ಅವಗಾಹಿಸಿದಾಗ ಸದರಿ ವರದಿಗಳಂತೆ ಸುಮಾರು 41,57,694 ರೂ.ಗಳ ಉಗ್ರಾಣ ಸಾಮಗ್ರಿಗಳ ದುರುಪಯೋಗ/ಅವ್ಯವಹಾರವಾಗಿದೆಯೆಂದು ಮೇಲ್ನೋಟಕ್ಕೆ ಕಂಡು ಬಂದುದರಿಂದ ಈ ಬಗ್ಗೆ ಸಂಬಂಧಪಟ್ಟವರೆಲ್ಲರ ಮೇಲೆ ಇಲಾಖಾ ವಿಚಾರಣೆ ಹೂಡಲು ನಿರ್ಧರಿಸಿ ಕರಡು ಆರೋಪ ಪಟ್ಟಿ ಕಳುಹಿಸಲು ಹಾಗೂ ಶ್ರೀ ಬಿ.ಕೆ. ಮಂಗಳಗಿ ಇವರು ಈ ಪ್ರಕರಣದಲ್ಲಿ ಎಸಗಿರುವರೆನ್ನಲಾದ ಕ್ರಿಮಿನಲ್ ನಡತೆಗೆ ಸಂಬಂಧಿಸಿದಂತೆ ಅವರ ಮೇಲೆ ಕ್ರಿಮಿನಲ್ ಮೊಕದ್ದಮೆ ಸಹ ಹೂಡಲು ಕಾರ್ಯನಿರ್ವಾಹಕ ಅಧಿಕಾರಿಗೆ ನಿರ್ದೇಶನ ನೀಡಿತ್ತು. ಅದರಂತೆ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಜಿಲ್ಲಾ ಪಂಚಾಯತ್, ದಾವಣಗೆರೆ ಇವರು ಶ್ರೀ ಮಂಗಳಗಿ ಇವರಿಗೆ ಸಂಬಂಧಿಸಿದಂತೆ ಕ್ರಿಮಿನಲ್ ಮೊಕದ್ದಮೆ ಹೂಡಲು ಕ್ರಮ ಕೈಗೊಂಡು ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ದಿನಾಂಕ:24.11.2000ರ ಪತ್ರದಲ್ಲಿ ಈ ಕೆಳಕಂಡ ಅಧಿಕಾರಿ:ನೌಕರರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಕರಡು ದೋಷಾರೋಪಣಾ ಪಟ್ಟಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

1. ಶ್ರೀ ವೈ. ರುದ್ರಮುನಿ, ಕಾರ್ಯಪಾಲಕ ಇಂಜಿನಿಯರ್,
2. ಶ್ರೀ ಎಸ್.ಎ. ಪಾಟೀಲ್, ಕಾರ್ಯಪಾಲಕ ಇಂಜಿನಿಯರ್,
3. ಶ್ರೀ ಎಂ. ಕೇಶವಮೂರ್ತಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಹಾಗೂ (ಕಾಪಾಇಂ ಪ್ರಭಾರ),
4. ಶ್ರೀ ಇ. ಶಾಂತರಾಂ, ಲೆಕ್ಕಾಧೀಕ್ಷಕ,
5. ಶ್ರೀ ಬಿ. ಯುನಸ್, ಲೆಕ್ಕಾಧೀಕ್ಷಕ,
6. ಶ್ರೀ ಗೌಸ್ ಮೊಯಿದ್ದೀನ್, ಲೆಕ್ಕಾಧೀಕ್ಷಕ,
7. ಶ್ರೀ ಬಿ.ಕೆ. ಮಂಗಳಗಿ, ಪ್ರಥಮ ದರ್ಜೆ ಉಗ್ರಾಣ ಪಾಲಕ,
8. ಶ್ರೀ ಮಂಜುನಾಥ್, ಉಗ್ರಾಣಪಾಲಕ.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿದ ಮೇಲ್ಕಂಡ ಅಧಿಕಾರಿ:ನೌಕರರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ, ಮೇಲ್ಮನವಿ) ನಿಯಮಾವಳಿಗಳು 1957ರ ನಿಯಮ 11ರನ್ವಯ ಇಲಾಖೆ ವಿಚಾರಣೆ ಹೂಡಿ ಮೇಲೆ ಓದಲಾದ ಕ್ರಮ ಸಂಖ್ಯೆ: (2)ರ ದಿನಾಂಕ: 14.02.01ರ ಕಾರಣ ಕೇಳುವ ನೋಟೀಸ್‌ನೊಂದಿಗೆ ಆರೋಪಪಟ್ಟಿ ಜಾರಿ ಮಾಡಿತ್ತು. ಆಪಾದಿತ ಅಧಿಕಾರಿ:ನೌಕರರು ತಮ್ಮ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರು. ಸದರಿಯವರ ಲಿಖಿತ ಹೇಳಿಕೆಗಳನ್ನು ಸರ್ಕಾರವು ಪರಿಶೀಲಿಸಿ ಅವುಗಳು ಸಮರ್ಪಕವಾಗಿಲ್ಲವೆಂದು ಕಂಡು ಬಂದುದರಿಂದ ಮತ್ತು ಆಪಾದಿತ ಅಧಿಕಾರಿ:ನೌಕರರು ಆರೋಪಿತ ದುರ್ನಡತೆಯನ್ನು ಎಸಗಿದ್ದಾರೆಂದು ದಾಖಲೆಗಳಿಂದ ಮೇಲ್ನೋಟಕ್ಕೆ ಕಂಡು ಬಂದುದರಿಂದ ಆಪಾದಿತರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶವನ್ನು ಅರಿಯಲು ಪ್ರಕರಣದಲ್ಲಿ ವಿವರವಾದ ವಿಚಾರಣಾ ನಡೆಸಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಆದೇಶದಲ್ಲಿ ನಿವೃತ್ತ ಜಿಲ್ಲಾ ನ್ಯಾಯಾಧೀಶರಾದ ಶ್ರೀ ಸೋಸಲೆ ಇಂದೂಧರ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪಕಾರ್ಯದರ್ಶಿ, ಜಿಲ್ಲಾ ಪಂಚಾಯತ್, ದಾವಣಗೆರೆ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿತ್ತು. ಅದರಂತೆ ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (5)ರಂತೆ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿನ ಆಪಾದಿತರಾದ ಶ್ರೀ ಬಿ.ಕೆ. ಮಂಗಳಗಿ, ಪ್ರಥಮ ದರ್ಜೆ ಉಗ್ರಾಣಪಾಲಕ ಇವರ ಮೇಲಿನ ಎಲ್ಲಾ ಆಪಾದನೆಗಳು ರುಜುವಾತಾಗಿರುವುದಾಗಿ ಹಾಗೂ ಉಳಿದವರ ಮೇಲಿನ ಆಪಾದನೆಗಳು ರುಜುವಾತಾಗಿರುವುದಿಲ್ಲವೆಂದು ಸರ್ಕಾರಕ್ಕೆ ವರದಿ ಮಾಡಿದ್ದರು. ಉಳಿದ ಆಪಾದಿತರ ಮೇಲಿನ ಆರೋಪಗಳು ವಿವರವಾದ ವಿಚಾರಣೆಯಲ್ಲಿ ಸಾಬೀತಾಗಿರುವುದಿಲ್ಲವೆಂದು ವಿಚಾರಣಾಧಿಕಾರಿಗಳು ವರದಿ ಮಾಡಿದ್ದರೂ ಸಹ ವಿಭಾಗದ ಮುಖ್ಯಸ್ಥರಾದ ಕಾರ್ಯಪಾಲಕ ಇಂಜಿನಿಯರ್‌ರಾದ ಶ್ರೀ ವೈ. ರುದ್ರಮುನಿ, ಶ್ರೀ ಎಸ್.ಎ. ಪಾಟೀಲ್, ಮತ್ತು ಶ್ರೀ ಎಂ. ಕೇಶವಮೂರ್ತಿ ಇವರುಗಳು ಲೆಕ್ಕಾಧೀಕ್ಷಕರೊಡನೆ ಕಾಲಕಾಲಕ್ಕೆ ಉಪವಿಭಾಗದ ದಾಖಲೆಗಳನ್ನು ಪರಿಶೀಲಿಸಿ ಮೇಲ್ವಿಚಾರಣೆ ನಡೆಸಿದಲ್ಲಿ ಅಕ್ರಮ ತಡೆಯಬಹುದಿತ್ತು. ಲೆಕ್ಕಾಧೀಕ್ಷಕರಾದ ಶ್ರೀ ಗೌಸ್ ಮೊಯಿದ್ದೀನ್, ಶ್ರೀ ಬಿ. ಯುನಸ್, ಮತ್ತು ಶ್ರೀ ಇ. ಶಾಂತರಾಂ ಇವರುಗಳು ಉಗ್ರಾಣ ದಾಖಲೆಗಳನ್ನು ಪರಿಶೀಲಿಸದೆ ಉಪವಿಭಾಗದ ಲೆಕ್ಕ ಪತ್ರಗಳನ್ನು ಪರಿಶೀಲಿಸದೆ ಕರ್ತವ್ಯಲೋಪವೆಸಗಿದ್ದಾರೆಂದೂ, ಹಾಗೂ ಶ್ರೀ ಮಂಜುನಾಥ್, ಉಗ್ರಾಣ ಪಾಲಕ ಇವರು ಸಹಾ ತಮ್ಮ ಕರ್ತವ್ಯ ನಿರ್ವಹಣೆಯಲ್ಲಿ ವಿಫಲರಾಗಿದ್ದಾರೆಂದು ಸರ್ಕಾರವು ವಿಚಾರಣಾ ವರದಿಯನ್ನು ಒಪ್ಪದೆ, ನಿಯಮ 11(ಎ)ರಂತೆ ತನ್ನದೆ ಆದ ನಿರ್ಣಯಗಳನ್ನು ದಾಖಲಿಸಿ ಆಪಾದಿತರ ಮೇಲಿನ ಆಪಾದನೆಗಳು ಮೇಲಿನಂತೆ ರುಜುವಾತಾಗುತ್ತವೆಂದು ನಿರ್ಣಯಿಸಿ ತನ್ನ ನಿರ್ಣಯಗಳನ್ನು ದಾಖಲಿಸಿ ಆಪಾದಿತ ಅಧಿಕಾರಿ:ನೌಕರರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (6)ರಲ್ಲಿ ಎರಡನೇ ಕಾರಣ ಕೇಳುವ ನೋಟಿಸ್‌ನ್ನು ಜಾರಿ ಮಾಡಿತ್ತು.

ಸದರಿ ಎರಡನೇ ಕಾರಣ ಕೇಳುವ ನೋಟಿಸ್‌ಗೆ ಆಪಾದಿತ ಅಧಿಕಾರಿ:ನೌಕರರು ಮೇಲೆ ಓದಲಾದ ಕ್ರಮಸಂಖ್ಯೆ (7)ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಸರ್ಕಾರವನ್ನು ಕೋರಿದ್ದರು. ಆಪಾದಿತರು 2ನೇ ಕಾರಣ ಕೇಳುವ ನೋಟಿಸ್‌ಗೆ ನೀಡಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿದಾಗ ಸದರಿ ಅಕ್ರಮಗಳಿಗೆ ಕಾರ್ಯಪಾಲಕ ಇಂಜಿನಿಯರ್‌ರಾದ ಶ್ರೀ ವೈ. ರುದ್ರಮುನಿ, ಶ್ರೀ ಎಸ್.ಎ. ಪಾಟೀಲ್ (ಪ್ರಸ್ತುತ ನಿಧನ ಹೊಂದಿದ್ದಾರೆ), ಮತ್ತು ಶ್ರೀ ಬಿ.ಕೆ. ಮಂಗಳಗಿ, ಪ್ರಥಮ ದರ್ಜೆ ಉಗ್ರಾಣಪಾಲಕ ಇವರುಗಳು ಕಾರಣವೆಂದು ಸಾಕ್ಷ್ಯಾಧಾರಗಳಿಂದ ಕಂಡು ಬರುತ್ತಿರುವುದರಿಂದ ಹಾಗೂ ಇವರುಗಳು ಸಲ್ಲಿಸಿರುವ ಲಿಖಿತ ಹೇಳಿಕೆಗಳನ್ನು ಒಪ್ಪಲು ಯಾವುದೇ ಸಕಾರಣಗಳು ಇರುವುದಿಲ್ಲವಾದ್ದರಿಂದ ಇವರುಗಳ ಮೇಲಿನ ಆರೋಪಗಳು ರುಜುವಾತಾಗುತ್ತವೆಂದು ಸರ್ಕಾರವು ನಿರ್ಣಯಿಸಿದೆ. ಆದ್ದರಿಂದ ಈ ಬಗ್ಗೆ ವಿಧಿವಿಧಾನಗಳನ್ನು ಪೂರೈಸಿದ ನಂತರ ಪ್ರತ್ಯೇಕ ಆದೇಶ ಹೊರಡಿಸಲು ಸರ್ಕಾರವು ನಿರ್ಣಯಿಸಿದೆ.

ಪ್ರಕರಣದಲ್ಲಿನ ಉಳಿದ ಆಪಾದಿತ ಅಧಿಕಾರಿ:ನೌಕರರಾದ ಲೆಕ್ಕಾಧೀಕ್ಷಕರಾದ ಶ್ರೀ ಗೌಸ್ ಮೊಯಿದ್ದೀನ್, ಶ್ರೀ ಬಿ. ಯುನಸ್, ಮತ್ತು ಶ್ರೀ ಇ. ಶಾಂತರಾಂ ಇವರುಗಳು ತಮ್ಮ ಲಿಖಿತ ಹೇಳಿಕೆಗಳಲ್ಲಿ ತಿಳಿಸಿರುವಂತೆ ಎಲ್ಲಾ ಆರೋಪಗಳು ಉಗ್ರಾಣ ಸಾಮಗ್ರಿಗಳ ಕೊರತೆಗಳಿಗೆ ಸಂಬಂಧಿಸಿದವುಗಳಾಗಿದ್ದು, ಲೆಕ್ಕ ಪತ್ರಗಳ ಸಂಕಲನ ಕಾರ್ಯದ ನಂತರ ಸದರಿ ವ್ಯವಹಾರಗಳನ್ನು ಉಗ್ರಾಣಪಾಲಕರಾದ ಶ್ರೀ ಬಿ.ಕೆ. ಮಂಗಳಗಿ ಇವರು ಎಸಗಿರುವುದಾಗಿ ತಿಳಿಸಿದ್ದು ಹಾಗೂ ಅವರು ಉಗ್ರಾಣ ಶಾಖೆಯಲ್ಲಿ ನಡೆಯುತ್ತಿದ್ದ ಸಂಹಿತೆ ನಿಯಮಗಳ ಉಲ್ಲಂಘನೆ, ಉಗ್ರಾಣಪಾಲಕರ ಬೇಜವಾಬ್ದಾರಿತನ ಇತ್ಯಾದಿಗಳನ್ನು ನಿಯಂತ್ರಿಸುವಲ್ಲಿ ಸಾಕಷ್ಟು ಪ್ರಯತ್ನಪಟ್ಟಿರುವುದು ಅವರು ನೀಡಿರುವ ದಾಖಲೆಗಳು:ಹೇಳಿಕೆಗಳಿಂದ ಕಂಡು ಬರುವುದರಿಂದ ಉಗ್ರಾಣ ಶಾಖೆಯಲ್ಲಿ ನಡೆದಿರುವ ಉಗ್ರಾಣ ಸಾಮಗ್ರಿಗಳ ದುರುಪಯೋಗಕ್ಕೆ ಅವರನ್ನು ಹೊಣೆಗಾರರನ್ನಾಗಿ ಮಾಡುವುದು ಸೂಕ್ತವಲ್ಲವೆಂದು ಸರ್ಕಾರವು ನಿರ್ಧರಿಸಿ ಅವರನ್ನು ಉಲ್ಲೇಖ (8)ರ ಆದೇಶದ ಅನ್ವಯ ದೋಷಮುಕ್ತಗೊಳಿಸಿದೆ. ಶ್ರೀ ಮಂಜುನಾಥ, ಉಗ್ರಾಣಪಾಲಕ ಇವರು ನೀಡಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿ ಅವರೂ ಸಹಾ ಪ್ರಕರಣದಲ್ಲಿ ಭಾಗಿಯಾಗಿಲ್ಲವೆಂಬ ನಿರ್ಣಯಕ್ಕೆ ಬಂದು ಅವರನ್ನು ಆರೋಪಗಳಿಂದ ದೋಷಮುಕ್ತಗೊಳಿಸಲಾಗಿದೆ.

ಪ್ರಕರಣದಲ್ಲಿನ ಮತ್ತೊಬ್ಬ ಆಪಾದಿತನಾದ ಶ್ರೀ ಎಂ. ಕೇಶವಮೂರ್ತಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ ಇವರು ವಿಭಾಗದ ಕಛೇರಿಯಲ್ಲಿ ಕೇವಲ ಒಂದು ವಾರವಷ್ಟೇ ಪ್ರಭಾರಿ ಕಾರ್ಯಪಾಲಕ ಇಂಜಿನಿಯರ್‌ರಾಗಿ ಕೆಲಸ ಮಾಡಿರುವುದರಿಂದ ಹಾಗೂ ಪ್ರಕರಣಕ್ಕೆ ಸಂಬಂಧಿಸಿದ ಅವ್ಯವಹಾರ ವಿಭಾಗ ಮಟ್ಟದಲ್ಲಿ ನಡೆದಿರುವುದು ಕಂಡು ಬರುವುದರಿಂದ ಉಪವಿಭಾಗದಲ್ಲಿ ಸಹಾಯಕ ಕಾರ್ಯಪಾಲಕ ಇಂಜಿನಿಯರ್‌ರಾಗಿ ಕರ್ತವ್ಯ ನಿರ್ವಹಿಸಿದ ಶ್ರೀ ಎಂ. ಕೇಶವಮೂರ್ತಿ ಇವರನ್ನು ಆರೋಪಗಳಿಂದ ದೋಷಮುಕ್ತಗೊಳಿಸಲು ಸರ್ಕಾರವು ನಿರ್ಣಯಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ 44 ಇಎನ್‌ಕ್ಯೂ 2000, ಬೆಂಗಳೂರು, ದಿನಾಂಕ:20ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಹರಪನಹಳ್ಳಿ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ ಕಛೇರಿಯ ಉಗ್ರಾಣದಲ್ಲಿನ ಅಕ್ರಮಗಳಿಗೆ ಸಂಬಂಧಿಸಿದಂತೆ ಶ್ರೀ ಎಂ. ಕೇಶವಮೂರ್ತಿ, ಸಹಾಯಕ ಕಾರ್ಯಪಾಲಕ ಇಂಜಿನಿಯರ್ (ಕಾರ್ಯಪಾಲಕ ಇಂಜಿನಿಯರ್ ಪ್ರಭಾರ) ಇವರ ಮೇಲೆ ಮಾಡಲಾಗಿದ್ದ ಆರೋಪಗಳನ್ನು ಕೈಬಿಟ್ಟು ಅವರನ್ನು ದೋಷಮುಕ್ತರನ್ನಾಗಿಸಿದೆ.

ಪ್ರಕರಣಕ್ಕೆ ಸಂಬಂಧಿಸಿದ ಇನ್ನುಳಿದ ಆಪಾದಿತ ಅಧಿಕಾರಿ:ನೌಕರರ ಬಗ್ಗೆ ಪ್ರತ್ಯೇಕ ಆದೇಶ ಹೊರಡಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ(ಸೇವೆಗಳು-ಎ),

ಪಿ.ಆರ್. 1353 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಎಸ್. ರಾಜಾರಾಂ, ಕೆಎಎಸ್ (ಹಿ. ಶ್ರೇಣಿ) ಅಧಿಕಾರಿ, ಶ್ರೀ ಬಿ.ಆರ್. ಕೃಷ್ಣನ್, ಕೆಎಎಸ್ (ಕಿ.ಶ್ರೇಣಿ) ಅಧಿಕಾರಿ ಮತ್ತು ಶ್ರೀ ಲಕ್ಷ್ಮಿನರಸಯ್ಯ, ಕಾರ್ಯನಿರ್ವಾಹಕ ಅಧಿಕಾರಿ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆ ವಿಚಾರಣಾಧಿಕಾರಿ ಹಾಗೂ ಮಂಡನಾಧಿಕಾರಿಯನ್ನು ನೇಮಿಸಿ ಆದೇಶ ಹೊರಡಿಸುವ ಬಗ್ಗೆ.

**ಓದಲಾಗಿದೆ:**
1. ನೋಟೀಸ್ ಕ್ರಮಾಂಕ: ಸಿಆಸುಇ 70 ಎಸ್‌ಇಎನ್ 95, ದಿನಾಂಕ: 01.08.2003.
2. ಶ್ರೀ ಎಸ್. ರಾಜಾರಾಂ, ಶ್ರೀ ಬಿ.ಆರ್. ಕೃಷ್ಣನ್ ಮತ್ತು ಲಕ್ಷ್ಮಿನರಸಯ್ಯ ಅವರುಗಳ ಉತ್ತರಕ್ರಮವಾಗಿ ದಿನಾಂಕ: 29.08.2003, 25.08.2003 ಮತ್ತು 18.08.2003.

**ಪ್ರಸ್ತಾವನೆ:**

ಉಪವಿಭಾಗಾಧಿಕಾರಿ, ಚಿಕ್ಕಬಳ್ಳಾಪುರ ತಹಸೀಲ್ದಾರ್, ಗೌರಿಬಿದನೂರು ತಾಲ್ಲೂಕು ಹಾಗೂ ಕ್ಷೇತ್ರಾಭಿವೃದ್ಧಿ ಅಧಿಕಾರಿ ಗೌರಿಬಿದನೂರು ಈ ಹುದ್ದೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಕೋಲಾರ ಜಿಲ್ಲೆ, ಗೌರಿಬಿದನೂರು ತಾಲ್ಲೂಕು ಪಂಚಾಯತ್ ವ್ಯಾಪ್ತಿಯಲ್ಲಿ ಆಶ್ರಯ ಯೋಜನೆ ಅಡಿಯಲ್ಲಿ ಫಲಾನುಭವಿಗಳಿಗೆ ಉಚಿತ ನಿವೇಶನ ಹಂಚುವ ಸಲುವಾಗಿ ಗೌರಿಬಿದನೂರು ತಾಲ್ಲೂಕು, ಮಂಚೇನಹಳ್ಳಿ ಹೋಬಳಿ, ಅದ್ದೆಕೊಂಪ ಗ್ರಾಮದ ಸರ್ವೆ ನಂಬರು 76ರಲ್ಲಿ ಖರೀದಿಸಲಾದ 4 ಎಕರೆ 3 ಗುಂಟೆ ಜಮೀನಿನ ಸಂಬಂಧ ವಾಸ್ತವವಾಗಿ ಜಮೀನು 1 ಎಕರೆ 3 ಗುಂಟೆ ಮಾತ್ರ ಇದ್ದಾಗ್ಯೂ ಸ್ಥಳ ತಪಾಸಣೆ ಮಾಡದೆ ದಾಖಲಾತಿ ಆಧಾರದ ಮೇಲೆ 4 ಎಕರೆ 3 ಗುಂಟೆ ಜಮೀನಿಗೆ ಹಣ ಪಾವತಿಸುವ ಮೂಲಕ ರೂ. 58,725-00ಗಳಷ್ಟು ಸರ್ಕಾರಕ್ಕೆ ನಷ್ಟವುಂಟು ಮಾಡಿದ ಆರೋಪಕ್ಕಾಗಿ ಶ್ರೀ ಎನ್. ರಾಜಾರಾಂ, ಕೆಎಎಸ್ (ಹಿ. ಶ್ರೇಣಿ) ಅಧಿಕಾರಿ, ಶ್ರೀ ಬಿ.ಆರ್. ಕೃಷ್ಣನ್, ಕೆಎಎಸ್ (ಕಿ. ಶ್ರೇಣಿ) ಅಧಿಕಾರಿ ಮತ್ತು ಶ್ರೀ ಲಕ್ಷ್ಮಿನರಸಯ್ಯ, ತಾಲ್ಲೂಕು ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿ ಅವರುಗಳಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ: 01.08.2003ರ ನೋಟಿಸ್ ಜಾರಿ ಮಾಡಿ ಸಮಜಾಯಿಷಿ ಕೇಳುವ ಮೂಲಕ ಅವರುಗಳ ವಿರುದ್ಧ ಜಂಟಿ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟಿಸ್‌ಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 29.08.2003, 25.08.2003 ಮತ್ತು 18.08.2003ರ ಉತ್ತರ ಸಲ್ಲಿಸಿದ ಆರೋಪಿಗಳು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆರೋಪಿತ ಅಧಿಕಾರಿಗಳ ಉತ್ತರಗಳನ್ನು ಪರಿಶೀಲಿಸಿದ ಸರ್ಕಾರವು ಅವುಗಳು ಮನಗಾಣಿಸುವ ರೀತಿಯಲ್ಲಿಲ್ಲದಿರುವುದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರೆಸಲು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 70 ಎಸ್‌ಇಎನ್ 95, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 13 ರೊಡನೆ ಓದಿಕೊಂಡಂತೆ ಅದೇ ನಿಯಮಾವಳಿಯ ನಿಯಮ 11 (2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಎಸ್. ರಾಜಾರಾಂ, ಕೆ.ಎ.ಎಸ್. (ಹಿ. ಶ್ರೇಣಿ) ಅಧಿಕಾರಿ, ಶ್ರೀ ಬಿ.ಆರ್. ಕೃಷ್ಣನ್, ಕೆಎಎಸ್ (ಕಿ. ಶ್ರೇಣಿ) ಅಧಿಕಾರಿ ಮತ್ತು ಶ್ರೀ ಲಕ್ಷ್ಮಿನರಸಯ್ಯ, ತಾಲ್ಲೂಕ್ ಪಂಚಾಯತ್ ಕಾರ್ಯನಿರ್ವಾಹಕ ಅಧಿಕಾರಿ ಅವರುಗಳ ವಿರುದ್ಧ ಮೇಲೆ ಹೇಳಲಾದ ಆರೋಪ ಕುರಿತು ವಿಚಾರಣೆ ಮಾಡುವ ಸಲುವಾಗಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ, ಕೋಲಾರ ಜಿಲ್ಲಾ ಪಂಚಾಯತ್, ಕೋಲಾರ ಅವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಗಿಸಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ.

ಶಿಸ್ತು ಪ್ರಾಧಿಕಾರದ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಗಳ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11 (5)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಜಿ.ವಿ. ಸೀನಪ್ಪ, ಉಪ ವಿಭಾಗಾಧಿಕಾರಿ, ಚಿಕ್ಕಬಳ್ಳಾಪುರ ಉಪವಿಭಾಗ, ಚಿಕ್ಕಬಳ್ಳಾಪುರ ಕೋಲಾರ ಜಿಲ್ಲೆ ಅವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1354 ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ

(ಸೇವೆಗಳು-3).

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ:** ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳನ್ನು ಮತ್ತು ಜಮೀನುಗಳನ್ನು ಗುರುತಿಸುವ ವಿಷಯದಲ್ಲಿ ರಚಿಸಲಾದ ಸಮಿತಿಯನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಸಕಇ 82 ಎಸ್.ಎ.ಡಿ.95 ದಿನಾಂಕ: 03.01.96
2. ಸರ್ಕಾರಿ ಆದೇಶ ಸಂಖ್ಯೆ: ಸಕಇ 82 ಎಸ್.ಎ.ಡಿ. 95 ದಿನಾಂಕ: 12.09.96
3. ಸರ್ಕಾರಿ ಆದೇಶ ಸಂಖ್ಯೆ: ಸಕಇ 82 ಎಸ್.ಎ.ಡಿ. 95 ದಿನಾಂಕ: 26.09.96.
4. ಸರ್ಕಾರಿ ಆದೇಶ ಸಂಖ್ಯೆ: ಸಕಇ 22 ಎಸ್.ಎ.ಡಿ. 2000 ದಿನಾಂಕ: 07.02.2000.
5. ಸರ್ಕಾರಿ ಆದೇಶ ಸಂಖ್ಯೆ: ಸಕಇ 22 ಎಸ್.ಎ.ಡಿ. 2000 ದಿನಾಂಕ: 17.11.2000.
6. ಮಾನ್ಯ ಸಮಾಜ ಕಲ್ಯಾಣ ಸಚಿವರ ಟಿಪ್ಪಣಿ ಸಂಖ್ಯೆ: ಸಕಸ:ಟಿ:820:2001, ದಿನಾಂಕ: 21.06.2001.
7. ಸರ್ಕಾರಿ ಆದೇಶ ಸಂಖ್ಯೆ: ಸಕಇ 22:ಎಸ್.ಡಿ.ಸಿ. 2000 ದಿನಾಂಕ: 17.07.2001.
8. ವ್ಯವಸ್ಥಾಪಕ ನಿರ್ದೇಶಕರು, ಕ.ಪ.ಜಾಪ.ವ.ಅ. ನಿಗಮ ಬೆಂಗಳೂರು ಇವರ ಟಿಪ್ಪಣಿ ದಿನಾಂಕ: 03.09.2001.
9. ಸರ್ಕಾರಿ ಆದೇಶ ಸಂಖ್ಯೆ: ಸಕಇ 22 ಎಸ್.ಎ.ಡಿ. 2000 ದಿನಾಂಕ: 04.09.2001.
10. ವ್ಯವಸ್ಥಾಪಕ ನಿರ್ದೇಶಕರು ಕ.ಪ.ಜಾ.ಪ.ವ.ಅ. ನಿಗಮ ಇವರ ಪತ್ರ ಸಂಖ್ಯೆ: ಕಪಜಾಪವಅನಿ/ಗಂಕಯೋ/ವಿಗು /2003-04/2377 ದಿನಾಂಕ:13.05.2003.

**ಪ್ರಸ್ತಾವನೆ:**

ಮೇಲೆ ಓದಲಾದ ಸರ್ಕಾರಿ ಆದೇಶ ದಿನಾಂಕ:03.01.96ರಲ್ಲಿ ಶ್ರೀ ಮೊರಾರ್ಜಿ ದೇಸಾಯಿ ಶತಮಾನೋತ್ಸವ ಗಂಗಾಕಲ್ಯಾಣ ನೀರಾವರಿ ಯೋಜನೆಯನ್ನು ಜಾರಿಗೆ ತರಲು ಸರ್ಕಾರ ಮಂಜೂರಾತಿ ನೀಡಿತ್ತು. ಈ ಯೋಜನೆಯಡಿಯಲ್ಲಿ ಜಮೀನುಗಳನ್ನು ಹಾಗೂ ಫಲಾನುಭವಿಗಳನ್ನು ಆಯ್ಕೆ ಮಾಡುವ ಸಂಬಂಧ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಲಾಯಿತು. ಮೇಲಿನ ಕ್ರಮ ಸಂಖ್ಯೆ: (2) ಮತ್ತು (3)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಜಿಲ್ಲಾಧಿಕಾರಿಯ ಅಧ್ಯಕ್ಷತೆಯಲ್ಲಿ ರಚಿಸಲಾದ ಸಮಿತಿಗೆ ಬದಲಾಗಿ ಕಂದಾಯ ಉಪವಿಭಾಗಾಧಿಕಾರಿಯ ಅಧ್ಯಕ್ಷತೆಯಲ್ಲಿ ಸಮಿತಿಯಲ್ಲಿ ರಚಿಸಲಾಯಿತು.

ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳನ್ನು ಮತ್ತು ಜಮೀನುಗಳನ್ನು ಗುರುತಿಸುವ ಸಲುವಾಗಿ ಕಂದಾಯ ಉಪ ವಿಭಾಗಾಧಿಕಾರಿಗಳ ಅಧ್ಯಕ್ಷತೆಯಲ್ಲಿದ್ದ ಸಮಿತಿಗೆ ಬದಲಾಗಿ ತಾಲ್ಲೂಕು ಕಾರ್ಯನಿರ್ವಾಹಣಾಧಿಕಾರಿಯ ಅಧ್ಯಕ್ಷತೆಯಲ್ಲಿ ಮೇಲೆ ಕ್ರಮ ಸಂಖ್ಯೆ (4)ರಲ್ಲಿ ಉಲ್ಲೇಖಿಸಿರುವ ಸರ್ಕಾರಿ ಆದೇಶದಲ್ಲಿ ಒಂದು ಸಮಿತಿಯನ್ನು ರಚಿಸಲಾಗಿದೆ. ಈ ಸಮಿತಿಯನ್ನು ತಾಲ್ಲೂಕಿನ ಹೆಚ್ಚಿನ ಪ್ರದೇಶಗಳನ್ನು ಪ್ರತಿನಿಧಿಸುವ ಶಾಸಕರನ್ನು ಸದಸ್ಯರನ್ನಾಗಿ ಮಾಡಲಾಗಿದೆ.

ಮೇಲೆ ಓದಲಾದ (5)ರ ಸರ್ಕಾರಿ ಆದೇಶದಲ್ಲಿ ತಾಲ್ಲೂಕು ಕಾರ್ಯನಿರ್ವಾಹಣಾಧಿಕಾರಿಯ ಬದಲಾಗಿ ತಾಲ್ಲೂಕಿನ ಹೆಚ್ಚಿನ ಪ್ರದೇಶಗಳನ್ನು ಪ್ರತಿನಿಧಿಸುವ ಶಾಸಕರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ರಚಿಸಲಾಯಿತು. ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ಅಲ್ಪ ಸಂಖ್ಯಾತರ ಅಭಿವೃದ್ಧಿ ನಿಗಮದ ಜಿಲ್ಲಾ ಪ್ರತಿನಿಧಿಗಳನ್ನು ಮೇಲಿನ ಸಮಿತಿಯಲ್ಲಿ ಸದರಿ ನಿಗಮಗಳಿಗೆ ಸಂಬಂಧಿಸಿದಂತೆ ಸದಸ್ಯ ಕಾರ್ಯದರ್ಶಿಯನ್ನಾಗಿ ನೇಮಿಸಲಾಗಿತ್ತು.

ಮೇಲೆ ಓದಲಾದ (6)ರಲ್ಲಿ ಮಾನ್ಯ ಸಮಾಜ ಕಲ್ಯಾಣ ಸಚಿವರು ತಾಲ್ಲೂಕು ಮಟ್ಟದಲ್ಲಿ ಹೆಚ್ಚಿನ ಪ್ರದೇಶಗಳನ್ನು ಪ್ರತಿನಿಧಿಸುವ ಶಾಸಕರನ್ನು ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿದ್ದು, ಅದರ ಬದಲು ವಿಧಾನಸಭಾ ಕ್ಷೇತ್ರದ ಶಾಸಕರನ್ನು ಕ್ಷೇತ್ರವಾರು ಶಾಸಕರನ್ನು ಅಧ್ಯಕ್ಷತೆಯಲ್ಲಿ ಸಮಿತಿ ರಚಿಸುವಂತೆ ಸೂಚಿಸಿದ ಹಿನ್ನೆಲೆಯಲ್ಲಿ ಓದಲಾದ (9)ರಲ್ಲಿ ಆದೇಶ ಹೊರಡಿಸಲಾಯಿತು.

ಮೇಲೆ ಓದಲಾದ (10)ರಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ ಬೆಂಗಳೂರು ಇವರು ಸದರಿ ಸಮಿತಿಯನ್ನು 2003-04ನೇ ಸಾಲಿಗೆ ಪುನರ್ ರಚಿಸುವಂತೆ ಕೋರಿರುತ್ತಾರೆ. ಕಾರಣ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ:ಸಕಇ 22 ಎಸ್.ಡಿ.ಸಿ. 2000, ಬೆಂಗಳೂರು, ದಿನಾಂಕ: 14ನೇ ಅಕ್ಟೋಬರ್, 2003**

ಪ್ರಸ್ತಾವನೆಯನ್ನು ಪರಿಶೀಲಿಸಲಾಯಿತು. ಕರ್ನಾಟಕ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮ, ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ಮತ್ತು ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮಗಳು ಜಾರಿಗೊಳಿಸುತ್ತಿರುವ ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳನ್ನು ಹಾಗೂ ಜಮೀನುಗಳನ್ನು ಗುರ್ತಿಸುವ ಸಲುವಾಗಿ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಸಮಿತಿಯನ್ನು (ಪುನರ್) ರಚಿಸಲಾಗಿದೆ.

| | | |
|---|---|---|
| 1. | ವಿಧಾನಸಭಾ ಕ್ಷೇತ್ರದ ಶಾಸಕರು | ಅಧ್ಯಕ್ಷರು |
| 2. | ತಾಲ್ಲೂಕಿನಲ್ಲಿ ಖಾಯಂ ಆಗಿ ವಾಸಿಸುತ್ತಿರುವ ವಿಧಾನ ಪರಿಷತ್ತಿನ ಸದಸ್ಯರು | ಸದಸ್ಯರು |
| 3. | ತಾಲ್ಲೂಕು ಕಾರ್ಯನಿರ್ವಹಣಾಧಿಕಾರಿ | ಸದಸ್ಯರು |
| 4. | ಸಹಾಯಕ ಕಾರ್ಯಪಾಲಕ ಅಭಿಯಂತರರು ಜಿಲ್ಲಾ ಪಂಚಾಯತ್ | ಸದಸ್ಯರು |
| 5. | ಸಹಾಯಕ ಕಾರ್ಯಪಾಲಕ ಅಭಿಯಂತರರು ಲೋಕೋಪಯೋಗಿ ಇಲಾಖೆ | ಸದಸ್ಯರು |
| 6. | ಸಹಾಯಕ ಕಾರ್ಯಪಾಲಕ ಅಭಿಯಂತರರು ಕರ್ನಾಟಕ ವಿದ್ಯುಚ್ಛಕ್ತಿ ಮಂಡಳಿ (ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ) | ಸದಸ್ಯರು |
| 7. | ತಾಲ್ಲೂಕು ಸಹಾಯಕ ನಿರ್ದೇಶಕರು, ಕೈಗಾರಿಕೆ ಇಲಾಖೆ | ಸದಸ್ಯರು |
| 8. | ಸಂಬಂಧಿಸಿದ ತಾಲ್ಲೂಕು ತಹಶೀಲ್ದಾರರು | ಸದಸ್ಯರು |

9. ತಾಲ್ಲೂಕಿನ ಸಹಾಯಕ ನಿರ್ದೇಶಕರು ಕೃಷಿ ಇಲಾಖೆ — ಸದಸ್ಯರು
10. ತಾಲ್ಲೂಕಿನ ಸಹಾಯಕ ನಿರ್ದೇಶಕರು, ತೋಟಗಾರಿಕೆ ಇಲಾಖೆ — ಸದಸ್ಯರು
11. ಜಿಲ್ಲೆಯ ಅರಣ್ಯಾಧಿಕಾರಿ — ಸದಸ್ಯರು
12. ಹಿಂದುಳಿದ ವರ್ಗಗಳ ಇಲಾಖೆಯ ನಿರೀಕ್ಷಕರು — ಸದಸ್ಯರು
13. ಕರ್ನಾಟಕ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗಗಳ ಅಭಿವೃದ್ಧಿ ನಿಗಮದ ತಾಲ್ಲೂಕು ಅಭಿವೃದ್ಧಿ ಅಧಿಕಾರಿ ಕರ್ನಾಟಕ ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಜಿಲ್ಲಾ ವ್ಯವಸ್ಥಾಪಕರು ಕರ್ನಾಟಕ ಅಲ್ಪಸಂಖ್ಯಾತರ ಅಭಿವೃದ್ಧಿ ನಿಗಮದ ಅಭಿವೃದ್ಧಿ ಅಧಿಕಾರಿ-ಅಭಿವೃದ್ಧಿ ಸಹಾಯಕರು (ಆಯಾ ನಿಗಮಕ್ಕೆ ಸಂಬಂಧಿಸಿದವರು) — ಸದಸ್ಯ ಕಾರ್ಯದರ್ಶಿ

ಈ ಸಮಿತಿಯು ಈ ಕೆಳಕಂಡ ಕಾರ್ಯಗಳನ್ನು ನಿರ್ವಹಿಸುವುದು.

1. ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳನ್ನು ಆಯ್ಕೆ ಮಾಡುವುದು;
2. ಈ ಕಾರ್ಯಕ್ರಮವು ಯಶಸ್ವಿಯಾಗಿ ಕಾರ್ಯಗತವಾಗಲು ಸಲಹೆ ನೀಡುವುದು;
3. ಯೋಜನೆಯಲ್ಲಿ ಲೋಪದೋಷಗಳು ಕಂಡು ಬಂದರೆ ಅಂತಹವುಗಳನ್ನು ನಿವಾರಿಸಲು ಸಲಹೆ ನೀಡುವುದು;
4. ಗುಣಮಟ್ಟದ ಸಲಕರಣೆಗಳನ್ನು ಅಳವಡಿಸಲು ಸಲಹೆ ನೀಡುವುದು;
5. ಫಲಾನುಭವಿಗಳು ಇದರ ಪೂರ್ಣಲಾಭ ಪಡೆಯಲು ಅವರಿಗೆ ಅಗತ್ಯ ಪ್ರೇರೇಪಣೆ ನೀಡುವುದು;
6. ಫಲಾನುಭವಿಗಳಿಗೆ ಯೋಜನೆಯ ಪೂರ್ಣಲಾಭ ಪಡೆಯಲು ಬೇರೆ ಇಲಾಖೆಯಿಂದ ನೆರವು ಅಥವಾ ಸಹಾಯ ಅಗತ್ಯವಾದಲ್ಲಿ ಅಂತಹ ಸಹಾಯ ಮತ್ತು ನೆರವನ್ನು ಸಂಬಂಧಿಸಿದ ಇಲಾಖೆಗಳಿಂದ ಒದಗಿಸಿ ಕೊಡಲು ಸಲಹೆ ನೀಡುವುದು.
7. ಈ ಯೋಜನೆಯಡಿ ಸೌಲಭ್ಯ ಪಡೆಯಲು ಅರ್ಹರಾದ ಪರಿಶಿಷ್ಟ ಜಾತಿ:ಪರಿಶಿಷ್ಟ ವರ್ಗ:ಹಿಂದುಳಿದ ವರ್ಗಗಳ ಮತ್ತು ಅಲ್ಪಸಂಖ್ಯಾತರಿಗೆ ಸೇರಿದ ರೈತರ ಬಗ್ಗೆ ವಿವರಗಳನ್ನು ಪಟ್ಟಿಮಾಡಿ ನಿರ್ವಹಿಸುವುದು. ಅಲ್ಲದೆ, ಸದರಿಯವರು ಹೊಂದಿರುವ ಜಮೀನುಗಳಲ್ಲಿ ಅಂತರ್ಜಲ: ನೀರು ದೊರೆಯುವ ಬಗ್ಗೆ ಮಾಹಿತಿಯನ್ನು ನಿರ್ವಹಿಸತಕ್ಕದ್ದು.
8. ಈ ಸಮಿತಿಯ ಸಲಹೆಗಳನ್ನು ಘಟಕದ ಆರ್ಥಿಕ ಮಿತಿಗೆ ಒಳಪಟ್ಟು ಅಧಿಕಾರಿಗಳು ಪರಿಶೀಲಿಸಿ ಪರಿಪಾಲನೆ ಮಾಡತಕ್ಕದ್ದು.

ಗಂಗಾ ಕಲ್ಯಾಣ ಯೋಜನೆಯಡಿ ಫಲಾನುಭವಿಗಳನ್ನು ಆಯ್ಕೆ ಮಾಡಲು ವಿಧಾನಸಭಾ ಕ್ಷೇತ್ರದ ಶಾಸಕರ ಅಧ್ಯಕ್ಷತೆಯಲ್ಲಿ ರಚಿಸಿರುವ ಸಮಿತಿಯನ್ನು 2003-04ನೇ ಸಾಲಿಗೆ ಮುಂದುವರಿಸಲು ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಮರುಳಸಿದ್ದಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಮಾಜ ಕಲ್ಯಾಣ ಇಲಾಖೆ.

ಪಿ.ಆರ್. 1355

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ಸಿ.ಜಿ. ಪಾಟೀಲ್, ತಹಸೀಲ್ದಾರ್, ಚಿಕ್ಕೋಡಿ ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಯ ಪ್ರತಿಕೂಲ ಷರಾದ ಬಗ್ಗೆ.

**ಓದಲಾಗಿದೆ:**
1. ದಿನಾಂಕ: 05.02.2003ರ ಬೆಳಗಾವಿ ವಿಭಾಗಾಧಿಕಾರಿಯವರ ಪತ್ರ ಸಂಖ್ಯೆ: ಕಂಶಾ:ಡಿವಿಸಿ:ಅಸ:97:02-03.
2. ಶ್ರೀ ಸಿ.ಜಿ. ಪಾಟೀಲ್, ತಹಸೀಲ್ದಾರ್, ಚಿಕ್ಕೋಡಿ, ಇವರ ದಿನಾಂಕ:10.02.2003ರ ಮನವಿ.
3. ಸರ್ಕಾರಿ ಪತ್ರ ಸಂಖ್ಯೆ:ಆರ್‌ಡಿ 90 ಎಎಸ್‌ಡಿ 2002, ದಿನಾಂಕ: 29.05.2003.
4. ಶ್ರೀ ಅತುಲ್ ಕುಮಾರ್ ತಿವಾರಿ, ಐಎಎಸ್, ಇವರ ದಿನಾಂಕ: 07.07.2003ರ ಪತ್ರ.

**ಪ್ರಸ್ತಾವನೆ:**

ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದ ಮೂಲಕ ವಿಭಾಗಾಧಿಕಾರಿಗಳು, ಬೆಳಗಾಂ ವಿಭಾಗ, ಬೆಳಗಾಂ ಇವರು ಶ್ರೀ ಸಿ.ಜಿ. ಪಾಟೀಲ್, ತಹಸೀಲ್ದಾರ್, ಚಿಕ್ಕೋಡಿ ಇವರ 2001-02ನೇ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಯಲ್ಲಿ ಪುನರ್ ಅವಲೋಕನ ಮಾಡುವ ಪ್ರಾಧಿಕಾರಿ ಮಾಡಿರುವ ಪ್ರತಿಕೂಲ ಷರಾವನ್ನು ಸದರಿ ತಹಸೀಲ್ದಾರರಿಗೆ ಜಾರಿ ಮಾಡಿರುವ ಬಗ್ಗೆ ತಿಳಿಸಿರುತ್ತಾರೆ.

ಕ್ರಮ ಸಂಖ್ಯೆ (2)ರಲ್ಲಿ ಓದಲಾದ ದಿನಾಂಕ: 10.02.2003ರ ಮನವಿಯಲ್ಲಿ ಶ್ರೀ ಸಿ.ಜಿ. ಪಾಟೀಲ್, ತಹಸೀಲ್ದಾರ್ ಇವರು ಸರ್ಕಾರಕ್ಕೆ ಮನವಿಯನ್ನು ಸಲ್ಲಿಸಿ 2001-02ನೇ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಯಲ್ಲಿ ನಮೂದಿಸಿರುವ ಪ್ರತಿಕೂಲ ಷರಾಗಳ ಬಗ್ಗೆ ವಿವರಣೆ ನೀಡಿ, ಮಾಡಲಾದ ಪ್ರತಿಕೂಲ ಷರಾವನ್ನು ತೆಗೆದು ಹಾಕುವಂತೆ ಕೋರಿದ್ದಾರೆ.

ಶ್ರೀ ಸಿ.ಜಿ. ಪಾಟೀಲ್, ತಹಸೀಲ್ದಾರ್, ಚಿಕ್ಕೋಡಿ, ಇವರ ಮನವಿಯನ್ನು ಪುನರ್ ಅವಲೋಕನ ಮಾಡುವ ಪ್ರಾಧಿಕಾರಿಯಾದ ಶ್ರೀ ಅತುಲ್ ಕುಮಾರ್ ತಿವಾರಿ, ಐಎಎಸ್ ಇವರಿಗೆ ಕಳುಹಿಸಿ, ಈ ಬಗ್ಗೆ ಅವರ ಸ್ಪಷ್ಟ ಅಭಿಪ್ರಾಯ ನೀಡುವಂತೆ ಕೋರಲಾಗಿ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಪುನರ್ ಅವಲೋಕನ ಮಾಡುವ ಪ್ರಾಧಿಕಾರಿ ಹಾಗೂ ಅಂದಿನ ಬೆಳಗಾಂ ಜಿಲ್ಲಾಧಿಕಾರಿಯವರಾದ ಶ್ರೀ ಅತುಲ್ ಕುಮಾರ್ ತಿವಾರಿಯವರು ಶ್ರೀ ಸಿ.ಜಿ. ಪಾಟೀಲ್, ತಹಸೀಲ್ದಾರ್, ಚಿಕ್ಕೋಡಿ ಇವರ 2001-02ನೇ ಸಾಲಿನ ಪ್ರತಿಕೂಲ ಷರಾವನ್ನೇ ಪುನರುಚ್ಚರಿಸಿ, ಸದರಿ ಅಧಿಕಾರಿಯವರ ಪ್ರಾಮಾಣಿಕತೆ ಸಂದೇಹಾಸ್ಪದ (Integrity of Sri C.G. Patil is questionable) ಎಂದು ತಿಳಿಸಿರುತ್ತಾರೆ.

ಈ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಮಾಡಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 90 ಎಎಸ್‌ಡಿ 2003, ಬೆಂಗಳೂರು, ದಿನಾಂಕ: 22ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಸನ್ನಿವೇಶಗಳ ಹಿನ್ನೆಲೆಯಲ್ಲಿ ಕರ್ನಾಟಕ ನಾಗರೀಕ ಸೇವಾ (ಕಾರ್ಯನಿರ್ವಹಣಾ ವರದಿ) ನಿಯಮಾವಳಿಗಳು 2000ದ ನಿಯಮ 10(2)ರಲ್ಲಿ ವಿಹಿತವಾದ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಶ್ರೀ ಸಿ.ಜಿ. ಪಾಟೀಲ್, ತಹಸೀಲ್ದಾರ್, ಚಿಕ್ಕೋಡಿ, ಇವರ 2001-2002ನೇ ಸಾಲಿನ ವಾರ್ಷಿಕ ಕಾರ್ಯ ನಿರ್ವಹಣಾ ವರದಿಯಲ್ಲಿ ದಾಖಲಿಸಿರುವ ಪ್ರತಿಕೂಲ ಷರಾವನ್ನು ಹಾಗೆಯೇ ಉಳಿಸಲು ಈ ಮೂಲಕ ಆದೇಶಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1356 ಕಂದಾಯ ಇಲಾಖೆ (ಸೇವೆಗಳು-3).

## ENERGY SECRETARIAT

**Sub:** Package of Reliefs to Farmers.

**Read:** 1. Government Order No. CD 107CLS 2003 Dated: 03.09.2003.

2. Letter No. MESCOM/FA/DCA(R)/AAO(R)/6344-45 Dated: 15th September 2003 from MD, MESCOM.

**Preamble:**

1. The Government had constituted a Committee under the Chairmanship of Minister for Co-Operation, for working out Relief-Package for farmers in the light of prevailing drought conditions in the State. The said Committee submitted its Report to the Government and based upon it, a number of relief measures have been announced as detailed in the Government Order cited at (1) above.

2. The relief measures also include rationalisation of power tariff in Malnad Districts for the year 2001-02. It has been brought to the notice of the Government by KPTCL that the farmers of Malnad region are supporting the Government programme of metering of Irrigation Pump sets (IP Sets). MESCOM has installed meters to more than 60% of the IP Sets in Malnad region during the year 2002-03. The power tariff for IP Sets in the State during the year 2001-02 has been at the rate of Rs. 540 per HP per year (LT-4(a)) or Rs. 600 per HP (LT-4(d)) or at the rate of fifty paise per unit for the energy consumed subject to an annual minimum of Rs. 300 per HP or part thereof of the sanctioned load, whichever is less. After the installation of meters to the IP Sets of the Malnad region, it has been noticed that their power bills calculated on meter reading basis is of the order of an amount equivalent to the flat rate of Rs. 300 per HP per year. These Malnad consumers have been paying their power dues during the year 2002-03 on the meter reading basis only. They, however, have represented that if the meters were installed to their IP Sets in the year 2001-02 itself, the power bill for that year too would have been of the same order. Most of the farmers have not cleared their power dues of the year 2001-02 due to this reason.

3. The contention of the farmers of Malnad region for rationalisation of tariff for the year 2001-02 has been given due consideration. Government consider that in the public interest, the tariff for IP Set consumers in Malnad area for the year 2001-02 shall be at the rate of Rs. 300 per HP per year.

Hence, the following Order:

**Government Order No. DE 90 PSR 2003, Bangalore, Dated: 16th October, 2003**

In exercise of its powers under Section 108 of the Electricity Act 2003 (Central Act 36 of 2003) Government of Karnataka hereby gives the following policy direction to KERC:

To rationalize the tariff of IP set consumers in Malnad Districts for the year 2001-2002 at the rate of Rs. 300 per HP per year. The total reduction in demand on account of it is estimated to be Rs. 15 Crores.

By Order and in the name of the Governor of Karnataka,

**K.L. JAYARAM**

Under Secretary to Government,

PR-1357 Energy Department.

## ಕಂದಾಯ ಸಚಿವಾಲಯ

**ವಿಷಯ:** ರವೀಂದ್ರನಾಥ ಠಾಗೂರ್ ಇನ್ಸ್‌ಟಿಟ್ಯೂಟ್ ಈ ಸಂಸ್ಥೆಗೆ ನೇಮಕವಾಗಿದ್ದ ಆಡಳಿತಾಧಿಕಾರಿ ಬದಲಾವಣೆ ಹಾಗೂ ಆಡಳಿತಾಧಿಕಾರಿ ಅವಧಿ ವಿಸ್ತರಣೆ ಕುರಿತು.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಕಂಇ 30 ಮುನೋಸೊ 2002, ದಿನಾಂಕ: 11.04.2003.

2. ಆಡಳಿತಾಧಿಕಾರಿಗಳ ಪತ್ರ ಸಂಖ್ಯೆ: ಇಎಲ್‌ಎನ್:ಸಿಆರ್:06:03-04, ದಿನಾಂಕ: 10.07.2003.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಆದೇಶದಲ್ಲಿ ರವೀಂದ್ರನಾಥ ಠಾಗೂರ್ ಇನ್ಸ್‌ಟಿಟ್ಯೂಟ್, ಆರ್.ಟಿ. ನಗರ, ಬೆಂಗಳೂರು ಈ ಸಂಸ್ಥೆಗೆ ಉಪವಿಭಾಗಾಧಿಕಾರಿ, ಬೆಂಗಳೂರು ಉತ್ತರ ವಿಭಾಗ ಅವರನ್ನು ಆಡಳಿತಾಧಿಕಾರಿಯನ್ನಾಗಿ ನೇಮಕ ಮಾಡಲಾಗಿತ್ತು. ಓದಲಾದ (2)ರಲ್ಲಿ ಆಡಳಿತಾಧಿಕಾರಿಗಳು ವರದಿ ಸಲ್ಲಿಸಿ ತಾವು ಪೂರ್ವ ಹಾಗೂ ದಕ್ಷಿಣ ತಾಲ್ಲೂಕುಗಳ ಭೂ ನ್ಯಾಯ ಮಂಡಳಿ ಅಧ್ಯಕ್ಷರಾಗಿ, ಈ ವ್ಯಾಪ್ತಿಯಲ್ಲಿ ಬರುವ ನ್ಯಾಯಾಲಯದ ಪ್ರಕರಣ ನಡೆಸಬೇಕಾಗಿರುವುದರಿಂದ ಸಂಘದ ಆಡಳಿತಾಧಿಕಾರಿಯಾಗಿ ಕಾರ್ಯನಿರ್ವಹಿಸುವಲ್ಲಿ ತೊಂದರೆಯಾಗುತ್ತಿರುವುದರಿಂದ ಬೇರೆ ಆಡಳಿತಾಧಿಕಾರಿ ನೇಮಿಸಬೇಕೆಂದು ಕೋರಿದ್ದಾರೆ. ಆಡಳಿತಾಧಿಕಾರಿಯವರ ಮನವಿಯನ್ನು ಪರಿಶೀಲಿಸಿ ಸಂಸ್ಥೆಗೆ ಬೇರೆ ಆಡಳಿತಾಧಿಕಾರಿ ನೇಮಕ ಮಾಡಲು ಹಾಗೂ ಆಡಳಿತಾಧಿಕಾರಿಯವರ ಅವಧಿ 10.10.2003ಕ್ಕೆ ಕೊನೆಗೊಳ್ಳಲಿರುವುದರಿಂದ, ಆಡಳಿತಾಧಿಕಾರಿ ಅವಧಿಯನ್ನು ವಿಸ್ತರಿಸಲು ಸರ್ಕಾರವು ತೀರ್ಮಾನಿಸಿದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 30 ಮುನೋಸೊ 2002, ಬೆಂಗಳೂರು, ದಿನಾಂಕ:17ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ರವೀಂದ್ರನಾಥ ಠಾಗೋರ್ ಇನ್ಸ್‌ಟಿಟ್ಯೂಟ್, ರಾಮಯ್ಯ ಗಾರ್ಡನ್, ಗಣೇಶ ಬ್ಲಾಕ್, ದಿಣ್ಣೂರು ಮುಖ್ಯ ರಸ್ತೆ, ಆರ್.ಟಿ. ನಗರ, ಬೆಂಗಳೂರು-32 ಈ ಸಂಸ್ಥೆಗೆ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಪ್ರಕಾರ ಆಡಳಿತಾಧಿಕಾರಿಯಾಗಿ ನೇಮಕ ಮಾಡಲಾಗಿದ್ದ ಬೆಂಗಳೂರು ಉತ್ತರ ವಿಭಾಗದ ವಿಭಾಗಾಧಿಕಾರಿ ಇವರ ಬದಲಿಗೆ ಮನೆ ಬಾಡಿಗೆ ಮತ್ತು ವಸತಿ ನಿಯಂತ್ರಕರು (ಪೂರ್ವ), ಪೋಡಿಯಂ ಬ್ಲಾಕ್, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು ಅವರನ್ನು ಆಡಳಿತಾಧಿಕಾರಿಯಾಗಿ ನೇಮಿಸಿದೆ ಹಾಗೂ ಆಡಳಿತಾಧಿಕಾರಿ ಅವಧಿಯನ್ನು ದಿನಾಂಕ: 11.10.2003 ರಿಂದ 6 ತಿಂಗಳ ಅವಧಿಗೆ ವಿಸ್ತರಿಸಲಾಗಿದೆ.

ಆಡಳಿತಾಧಿಕಾರಿಗಳು ಸಂಸ್ಥೆಯಲ್ಲಿಯ ಅವ್ಯವಹಾರಗಳನ್ನು ಸರಿಪಡಿಸಿ ಚುನಾವಣೆ ನಡೆಸಿ ಚುನಾಯಿತ ಆಡಳಿತ ಮಂಡಳಿಗೆ ಅಧಿಕಾರವನ್ನು ಹಸ್ತಾಂತರಿಸುವಂತೆ ಸೂಚಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಅಬ್ದುಲ್ ಹಮೀದ್**

ಪೀಠಾಧಿಕಾರಿ (ಪ್ರಭಾರ),

ಪಿ.ಆರ್. 1358 ಕಂದಾಯ ಇಲಾಖೆ (ನೋಂದಣಿ ಮತ್ತು ಮುದ್ರಾಂಕ).

**ವಿಷಯ:** ಕೆ.ಎ.ಎಸ್. ಅಧಿಕಾರಿಗಳಾಗಿ ತಹಶೀಲ್ದಾರ್ ವೃಂದದಲ್ಲಿ ಕಾಲಮಿತಿ ವೇತನ ಬಡ್ತಿ ಹಾಗೂ ಸ್ವಯಂಚಾಲಿತ ವೇತನ ಬಡ್ತಿಯನ್ನು ಮಂಜೂರು ಮಾಡುವ ಬಗ್ಗೆ.

**ಓದಲಾಗಿದೆ:**

1. ಸಿಆಸು ಇಲಾಖೆ (ಸೇ-2)ರ ಅ.ಟಿ. ಸಂಖ್ಯೆ: ಸಿಆಸುಇ 158 ಆಸೇಇ 03, ದಿನಾಂಕ: 04.08.2003.
2. ಸಿಆಸು ಇಲಾಖೆಯ (ಸೇ-3)ರ ಅ.ಟಿ. ಸಂಖ್ಯೆ: ಸಿಆಸುಇ 02 ಎಸ್‌ಇಎನ್ 03, ದಿನಾಂಕ: 21.07.03 ಮತ್ತು 20.09.2003.
3. ಅಧಿಸೂಚನೆ ಸಂಖ್ಯೆ: ಸಿಆಸುಇ 02 ಎಸ್‌ಕೆಜಿ 89, ದಿನಾಂಕ: 30.04.1990.
4. ಅಧಿಸೂಚನೆ ಸಂಖ್ಯೆ: ಸಿಆಸುಇ 02 ಎಸ್‌ಕೆಜಿ 94(1) ದಿನಾಂಕ: 02.07.1999.
5. ಅಧಿಸೂಚನೆ ಸಂಖ್ಯೆ: ಸಿಆಸುಇ 03 ಎಸ್‌ಕೆಜಿ 2000 ದಿನಾಂಕ: 04.07.2000.

**ಪ್ರಸ್ತಾವನೆ:**

ಪ್ರಸಕ್ತ ಕೆ.ಎ.ಎಸ್. ಅಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿರುವ ಈ ಕೆಳಕಂಡ ಅಧಿಕಾರಿಗಳು ಮನವಿಗಳನ್ನು ಸಲ್ಲಿಸಿ, ಅವರುಗಳು ತಹಶೀಲ್ದಾರ್ ವೃಂದಕ್ಕೆ ನೇರವಾಗಿ ಆಯ್ಕೆಯಾಗಿ ನಂತರ ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದಕ್ಕೆ ಬಡ್ತಿ ಪಡೆದಿದ್ದಾಗಿ ತಿಳಿಸಿ ತದನಂತರ ಸರ್ಕಾರವು ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದಕ್ಕೆ ನೀಡಿದ ಬಡ್ತಿಗಳನ್ನು ಪುನರಾವಲೋಕಿಸಿ ಜೇಷ್ಠತಾ ಪಟ್ಟಿಯನ್ನು ಪ್ರಕಟಿಸಿದ್ದು ಅದರಲ್ಲಿ ತಮಗೆ ನೀಡಿರುವ ಬಡ್ತಿಯ ದಿನಾಂಕವು ವಾಸ್ತವವಾಗಿ ಬಡ್ತಿ ಪಡೆದ ದಿನಾಂಕಕ್ಕಿಂತ ಮುಂದೂಡಲಾಗಿದೆಯೆಂದು ಹಾಗೂ ಇದರ ಪರಿಣಾಮ ತಮ್ಮ ವೇತನದಲ್ಲಿ ಇಳಿಕೆಯಾಗಿರುವುದರಿಂದ ತಾವು ತಹಶೀಲ್ದಾರ್ ವೃಂದದಲ್ಲಿಯೇ ಸತತವಾಗಿ 15 ವರ್ಷಗಳ ಸೇವೆ ಸಲ್ಲಿಸಿದಂತಾಗಿರುವುದರಿಂದ ತಮಗೆ 10 ವರ್ಷದ ಕಾಲಮಿತಿ ವೇತನ ಬಡ್ತಿ ಹಾಗೂ 15 ವರ್ಷದ ಸ್ವಯಂಚಾಲಿತ ಬಡ್ತಿಯನ್ನು ಮಂಜೂರು ಮಾಡುವಂತೆ ಕೋರಿದ್ದಾರೆ.

| | | | |
|---|---|---|---|
| 1. | ಮಹೇಂದ್ರ | 2. | ಶಿವಾನಂದ ಶರ್ಮಾ |
| 3. | ಸಿ.ಎಂ. ಈಶ್ವರ | 4. | ಪಿ.ವಿ. ಸಜ್ಜನ್ |
| 5. | ಬಿ.ಕೆ. ವಾಸು | 6. | ಎನ್. ರಾಮಸ್ವಾಮಿರೆಡ್ಡಿ |
| 7. | ಟಿ.ಡಿ. ಅಭಯಕುಮಾರ್ | 8. | ಹೆಚ್. ರಘುಪತಿ |
| 9. | ಎನ್.ಕೆ. ನಾರಾಯಣ | 10. | ಕೆ.ಹೆಚ್. ಕಾಕನೂರ್ |
| 11. | ಎ.ಪಿ. ಕರಪ್ಪನವರ್ | 12. | ಬಿ.ಎಲ್. ವೇದಮೂರ್ತಿ |
| 13. | ಮಾಜ್ ಅಹಮ್ಮದ್ ಷರೀಫ್ | | |

ಈ ಎಲ್ಲಾ ಅಧಿಕಾರಿಗಳ ಕೋರಿಕೆಗಳನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು ಹೊರಡಿಸಿರುವ ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದದ ಜೇಷ್ಠತಾ ಪಟ್ಟಿಯೊಂದಿಗೆ ಪರಿಶೀಲಿಸಲಾಗಿದ್ದು, ಅವುಗಳಲ್ಲಿ ಇವರುಗಳಿಗೆ ವಾಸ್ತವವಾಗಿ ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದಕ್ಕೆ ನೀಡಿದ ಬಡ್ತಿಯ ದಿನಾಂಕವು ಮುಂದೂಡಲ್ಪಟ್ಟು ಬಡ್ತಿಯ ಅರ್ಹತಾ ದಿನಾಂಕ ನೀಡಲಾಗಿದ್ದು ತಿಳಿದು ಬಂದಿದೆ. ಈ

ಎಲ್ಲಾ 13 ಜನ ಕೆ.ಎ.ಎಸ್. ಅಧಿಕಾರಿಗಳು ತಹಶೀಲ್ದಾರ್ ವೃಂದದಲ್ಲಿಯೇ ನಿರಂತರವಾಗಿ 15 ವರ್ಷಗಳ ಸೇವೆ ಸಲ್ಲಿಸಿದಂತಾಗುವುದರಿಂದ ಹಾಗೂ ಇವರುಗಳ ಸೇವೆಯು ತೃಪ್ತಿಕರವಾಗಿರುವುದರಿಂದ ಅಧಿಕೃತ ಜ್ಞಾಪನಾ ಸಂಖ್ಯೆ: ಎಫ್‌ಡಿ 01 ಎಸ್‌ಆರ್‌ಪಿ 85, ದಿನಾಂಕ: 22.01.1985 ಹಾಗೂ ಕರ್ನಾಟಕ ನಾಗರೀಕ ಸೇವಾ (ಸ್ವಯಂಚಾಲಿತ ವಿಶೇಷ ವೇತನ ಬಡ್ತಿ) ನಿಯಮಗಳು 1991ರ ಪ್ರಕಾರ ಇವರುಗಳಿಗೆ ಕಾಲಮಿತಿ ವೇತನ ಬಡ್ತಿ ಹಾಗೂ ಸ್ವಯಂಚಾಲಿತ ವಿಶೇಷ ವೇತನ ಬಡ್ತಿಯನ್ನು ಮಂಜೂರು ಮಾಡಲು ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 227 ಎಎಸ್‌ಡಿ 2002, ಬೆಂಗಳೂರು, ದಿನಾಂಕ: 17ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನೆಲೆಯಲ್ಲಿ, ಈ ಕೆಳಕಂಡ 13 ಜನ ಕೆ.ಎ.ಎಸ್. ಅಧಿಕಾರಿಗಳಿಗೆ ತಹಶೀಲ್ದಾರ್ ವೃಂದದಲ್ಲಿ ಅವರುಗಳ ಹೆಸರಿನ ಮುಂದೆ ತಿಳಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಕಾಲಮಿತಿ ವೇತನ ಬಡ್ತಿಯನ್ನು ಹಾಗೂ 15 ವರ್ಷಗಳ ಸ್ವಯಂಚಾಲಿತ ವಿಶೇಷ ವೇತನ ಬಡ್ತಿಯನ್ನು ಮಂಜೂರು ಮಾಡಲಾಗಿದೆ.

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು<br>**ಶ್ರೀಯುತರು** | ಕಾಲಮಿತಿ ವೇತನ ಬಡ್ತಿ ಮಂಜೂರಾತಿಯ ದಿನಾಂಕ | ಸ್ವಯಂಚಾಲಿತ ವಿಶೇಷ ವೇತನ ಬಡ್ತಿ ಮಂಜೂರಾತಿಯ ದಿನಾಂಕ |
|---|---|---|---|
| 1. | ಎ. ಮಹೇಂದ್ರ | 10.04.1987 | 10.04.1992 |
| 2. | ಶಿವಾನಂದ ಶರ್ಮಾ | 01.09.1984 | 01.09.1989 |
| 3. | ಸಿ.ಎಂ. ಈಶ್ವರ್ | 23.08.1984 | 23.08.1989 |
| 4. | ಪಿ.ವಿ. ಸಜ್ಜನ್ | 08.09.1984 | 07.09.1989 |
| 5. | ಬಿ.ಕೆ. ವಾಸು | 20.05.1987 | 20.05.1992 |
| 6. | ಎನ್. ರಾಮಸ್ವಾಮಿರೆಡ್ಡಿ | 16.07.1986 | 17.07.1991 |
| 7. | ಟಿ.ಡಿ. ಅಭಯಕುಮಾರ್ | 30.07.1986 | 31.07.1991 |
| 8. | ಹೆಚ್. ರಘುಪತಿ | 18.07.1986 | 19.07.1991 |
| 9. | ಎನ್.ಕೆ. ನಾರಾಯಣ | 10.08.1986 | 11.08.1991 |
| 10. | ಕೆ.ಹೆಚ್. ಕಾಕನೂರ್ | 18.07.1986 | 19.07.1991 |
| 11. | ಎ.ಪಿ. ಕೆರಪ್ಪನವರ್ | 01.08.1986 | 02.08.1991 |
| 12. | ಬಿ.ಎಲ್. ವೇದಮೂರ್ತಿ | 02.02.1980 | 03.02.1985 |
| 13. | ಮಾಜ್ ಅಹಮ್ಮದ್ ಷರೀಫ್ | 18.07.1986 | 19.07.1991 |

ಈ ಮೇಲಿನ ಅಧಿಕಾರಿಗಳು, ಈ ಹಿಂದೆ ಕಾಲಮಿತಿ ವೇತನ ಬಡ್ತಿ ಹಾಗೂ ಸ್ವಯಂಚಾಲಿತ ವಿಶೇಷ ವೇತನ ಬಡ್ತಿ ಸೌಲಭ್ಯಗಳನ್ನು ಪಡೆದಿದ್ದಲ್ಲಿ ಅದರಿಂದ ಲಭ್ಯವಾದ ಆರ್ಥಿಕ ಸೌಲಭ್ಯವು ಈ ಆದೇಶ ಹೊರಡಿಸಿದ ದಿನಾಂಕದಿಂದ ತಾನಾಗಿಯೇ ರದ್ದಾಗುತ್ತದೆ ಹಾಗೂ ಕೆ.ಎ.ಎಸ್. (ಕಿರಿಯ ಶ್ರೇಣಿ) ವೃಂದಕ್ಕೆ ವಾಸ್ತವಿಕವಾಗಿ ಮುಂಬಡ್ತಿ ಪಡೆದ ದಿನಾಂಕದಿಂದ ಅದೇ ವೃಂದಕ್ಕೆ ಬಡ್ತಿಯು ಮುಂದೂಡಲ್ಪಟ್ಟು ನೀಡಲಾದ ಅರ್ಹತಾ ದಿನಾಂಕದವರೆಗೆ, ಕೆ.ಎ.ಎಸ್ (ಕಿರಿಯ ಶ್ರೇಣಿ) ವೃಂದದಲ್ಲಿ ಪಡೆದಿರುವ ಹೆಚ್ಚುವರಿ ವೇತನವನ್ನು ಕಟಾಯಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 01 ಟಿಎಫ್‌ಪಿ 96, ದಿನಾಂಕ: 10.07.1996ರಲ್ಲಿ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳಿಗೆ ಪ್ರದತ್ತವಾಗಿರುವ ಅಧಿಕಾರದ ಆದೇಶದನ್ವಯ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಎಸ್. ಮಹಂತೇಶಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1359 ಕಂದಾಯ ಇಲಾಖೆ (ಸೇವೆಗಳು-3).

**ವಿಷಯ:** ಶ್ರೀಮತಿ ಶಹೀದಾ ಬೇಗಂ, ಹಿಂದಿನ ಪ್ರಭಾರ ಮುಖ್ಯಾಧಿಕಾರಿ, ಹರಪನಹಳ್ಳಿ ಪಟ್ಟಣ ಪಂಚಾಯಿತಿ, ಬಳ್ಳಾರಿ ಜಿಲ್ಲೆ ಹಾಲಿ ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ ಜಿಲ್ಲೆ ಇವರ ವಿರುದ್ಧದ ಆರೋಪಗಳನ್ನು ಮುಕ್ತಗೊಳಿಸುವ ಬಗ್ಗೆ.

**ಓದಲಾಗಿದೆ:**

1. ದಿನಾಂಕ: 09.10.2000ದ ಸರ್ಕಾರಿ ಆದೇಶ ಸಂಖ್ಯೆ: ಕಂಇ 03 ಎಡಿಇ 98.
2. ಗೌರವಾನ್ವಿತ ಉಪ ಲೋಕಾಯುಕ್ತರು ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ದಿನಾಂಕ: 11.12.2000ದ ಆದೇಶ ಸಂಖ್ಯೆ: ಲೋಕ್:ಐಎನ್‌ಕ್ಯೂ:107:14-ಎ:2000-01.
3. ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-3, ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು ಇವರ ದಿನಾಂಕ: 30.03.2002ರ ವಿಚಾರಣಾ ವರದಿ ಸಂಖ್ಯೆ:ಲೋಕ್:ಎಆರ್‌ಇ 3:ಇಎನ್‌ಕ್ಯೂ:12:2000-01.
4. ಗೌರವಾನ್ವಿತ ಕರ್ನಾಟಕ ಲೋಕಾಯುಕ್ತರು, ಬೆಂಗಳೂರು ಇವರ ದಿನಾಂಕ: 08.01.03ರ ಪತ್ರ ಸಂಖ್ಯೆ: ಲೋಕ: ಎಆರ್‌ಇ-3:ಇಎನ್‌ಕ್ಯೂ12:2000-01.

**ಪ್ರಸ್ತಾವನೆ:**

ಶ್ರೀಮತಿ ಶಹೀದಾ ಬೇಗಂ, ಹಿಂದಿನ ಪ್ರಭಾರ ಮುಖ್ಯಾಧಿಕಾರಿ, ಹರಪನಹಳ್ಳಿ ಪಟ್ಟಣ ಪಂಚಾಯಿತಿ ಬಳ್ಳಾರಿ ಜಿಲ್ಲೆ, ಹಾಲಿ ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರು 'ಬೇಬಾಕಿ ಪ್ರಮಾಣ ಪತ್ರ' ನೀಡುವ ಸಂಬಂಧ ಶ್ರೀ ಟಿ. ನಾಗರಾಜ್, ಹರಪನಹಳ್ಳಿ ರವರಿಂದ ದಿನಾಂಕ: 19.11.97ರಂದು ಅಕ್ರಮ ಸಂಭಾವನೆ ಕೇಳಿ ಪಡೆಯುತ್ತಿದ್ದಾಗ ಲೋಕಾಯುಕ್ತ ಪೊಲೀಸರ ಬಲೆಗೆ ಸಿಕ್ಕಿಬಿದ್ದ ಹಿನ್ನೆಲೆಯಲ್ಲಿ ಸದರಿ ಆರೋಪಿತರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಗೌರವಾನ್ವಿತ ಉಪಲೋಕಾಯುಕ್ತರಿಗೆ ವಹಿಸಲಾಗಿತ್ತು. ಅದರಂತೆ ಗೌರವಾನ್ವಿತ ಉಪ ಲೋಕಾಯುಕ್ತರು ಮೇಲೆ ಕ್ರಮ ಸಂಖ್ಯೆ: (2)ರಲ್ಲಿ ಓದಲಾದ ತಮ್ಮ ಆದೇಶದಲ್ಲಿ ಈ ಪ್ರಕರಣದಲ್ಲಿ ಇಲಾಖಾ ವಿಚಾರಣೆ ಜರುಗಿಸಲು ಹೆಚ್ಚುವರಿ ನಿಬಂಧಕರು, ವಿಚಾರಣೆಗಳು-3, ಲೋಕಾಯುಕ್ತ ಕಛೇರಿ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ನೇಮಿಸಿರುತ್ತಾರೆ. ಅದರನ್ವಯ ವಿಚಾರಣೆಯನ್ನು ಜರುಗಿಸಿರುವ ವಿಚಾರಣಾಧಿಕಾರಿಗಳು ಆರೋಪಿತರ ವಿರುದ್ಧದ ಆರೋಪಗಳನ್ನು ಸಾಬೀತು ಪಡಿಸುವಲ್ಲಿ ಶಿಸ್ತು ಪ್ರಾಧಿಕಾರವು ವಿಫಲಗೊಂಡಿರುವುದರಿಂದ ಸದರಿ ಆರೋಪಿತರ ವಿರುದ್ಧದ ಆರೋಪವು ಸಾಬೀತಾಗಿಲ್ಲವೆಂದು ಮೇಲೆ ಕ್ರಮ ಸಂಖ್ಯೆ: (3)ರಲ್ಲಿ ಓದಲಾದ ತಮ್ಮ ವಿಚಾರಣಾ ವರದಿಯಲ್ಲಿ ಅಭಿಪ್ರಾಯ ಪಟ್ಟಿರುತ್ತಾರೆ. ವಿಚಾರಣಾಧಿಕಾರಿಯವರ ವರದಿಯನ್ನು ಸರ್ಕಾರವು ಒಪ್ಪುವುದಾದಲ್ಲಿ ಆಪಾದಿತ ಅಧಿಕಾರಿಯನ್ನು ಅವರ ವಿರುದ್ಧದ ಆರೋಪಗಳಿಂದ ಮುಕ್ತಗೊಳಿಸಿ ಆದೇಶಿಸುವಂತೆ ಕ್ರಮ ಕೈಗೊಳ್ಳಬೇಕೆಂದು ಹಾಗೂ ಅಂತಹ ಕ್ರಮವನ್ನು ಕೈಗೊಂಡ ಬಗ್ಗೆ ಗೌರವಾನ್ವಿತ ಲೋಕಾಯುಕ್ತರಿಗೆ ಮಾಹಿತಿ ನೀಡುವಂತೆ ಮೇಲೆ ಕ್ರಮ ಸಂಖ್ಯೆ: (4)ರಲ್ಲಿ ಓದಲಾದ ಪತ್ರದಲ್ಲಿ ಗೌರವಾನ್ವಿತ ಲೋಕಾಯುಕ್ತರು ತಿಳಿಸಿರುತ್ತಾರೆ.

ವಿಚಾರಣಾಧಿಕಾರಿಗಳ ವಿಚಾರಣಾ ವರದಿ ಹಾಗೂ ಅದಕ್ಕೆ ಸಂಬಂಧಪಟ್ಟ ದಾಖಲಾತಿಗಳನ್ನು ಪರಿಶೀಲಿಸಿ ಸರ್ಕಾರವು ವಿಚಾರಣಾಧಿಕಾರಿಗಳ ವರದಿಯನ್ನು ಒಪ್ಪಿಕೊಂಡು ಶ್ರೀಮತಿ ಶಹೀದಾ ಬೇಗಂ ಹಿಂದಿನ ಪ್ರಭಾರ ಮುಖ್ಯಾಧಿಕಾರಿ, ಹರಪನಹಳ್ಳಿ ಪಟ್ಟಣ ಪಂಚಾಯಿತಿ, ಬಳ್ಳಾರಿ ಜಿಲ್ಲೆ ಹಾಲಿ ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ, ದಾವಣಗೆರೆ, ಅವರ ವಿರುದ್ಧದ ಆರೋಪಗಳು ಸಾಬೀತಾಗಿಲ್ಲದಿರುವುದು ಸ್ಪಷ್ಟವಾಗಿರುವುದರಿಂದ ಅವರನ್ನು ಆರೋಪ ಮುಕ್ತರನ್ನಾಗಿಸಲು ನಿರ್ಧರಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 03, ಎಡಿಇ 98, ಬೆಂಗಳೂರು, ದಿನಾಂಕ: 16ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ಕೂಲಂಕಷವಾಗಿ ಪರಿಶೀಲಿಸಿರುವ ಹಿನ್ನೆಲೆಯಲ್ಲಿ ಶ್ರೀಮತಿ ಶಹೀದಾ ಬೇಗಂ, ಹಿಂದಿನ ಪ್ರಭಾರ ಮುಖ್ಯಾಧಿಕಾರಿ, ಹರಪನಹಳ್ಳಿ ಪಟ್ಟಣ ಪಂಚಾಯಿತಿ, ಬಳ್ಳಾರಿ ಜಿಲ್ಲೆ, ಹಾಲಿ ಪುರಸಭಾ ತಹಶೀಲ್ದಾರ್, ಜಿಲ್ಲಾಧಿಕಾರಿಗಳ ಕಛೇರಿ ದಾವಣಗೆರೆ ಜಿಲ್ಲೆ ಇವರ ವಿರುದ್ಧ ದಿನಾಂಕ: 09.10.2000ದ ಸರ್ಕಾರಿ ಆದೇಶ ಸಂಖ್ಯೆ: ಆರ್‌ಡಿ 03 ಎಡಿಇ 98ರಲ್ಲಿ ಹೊರಿಸಲಾದ ಆರೋಪಗಳಿಂದ ಮುಕ್ತಗೊಳಿಸಿದೆ.

ಈ ಪ್ರಕರಣದ ಮಟ್ಟಿಗೆ ಸಂಬಂಧಿಸಿದಂತೆ ಶ್ರೀಮತಿ ಶಹೀದಾ ಬೇಗಂ, ಇವರ ವಿರುದ್ಧ ಈ ವಿಚಾರಣೆ ನಡೆಯದಿದ್ದಲ್ಲಿ ಅವರು ಯಾವ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹ ಇರುತ್ತಾರೋ ಅಂತಹ ಸೇವಾ ಸೌಲಭ್ಯಗಳನ್ನು ಪಡೆಯಲು ಅರ್ಹರಿರುತ್ತಾರೆ. ಈ ಪ್ರಕರಣಕ್ಕೆ ಸಂಬಂಧಿಸಿದಂತೆ ಶ್ರೀಮತಿ ಶಹೀದಾ ಬೇಗಂ ರವರನ್ನು ದಿನಾಂಕ: 16.03.98ರ ಸರ್ಕಾರಿ ಆದೇಶ ಸಂಖ್ಯೆ: ಕಂಇ 03 ಎಡಿಇ 98ರಲ್ಲಿ ಸೇವೆಯಿಂದ ಅಮಾನತ್ತುಗೊಳಿಸಲಾಗಿದ್ದು ಅದನ್ನು ಪುನರ್ ಪರಿಶೀಲಿಸಿ ದಿನಾಂಕ: 20.04.99ರ ಸರ್ಕಾರಿ ಆದೇಶ ಸಂಖ್ಯೆ: ಕಂಇ 03 ಎಡಿಇ 98ರನ್ವಯ ಅಮಾನತ್ತಿನಿಂದ ಬಿಡುಗಡೆಗೊಳಿಸಲಾಗಿರುತ್ತದೆ. ಆದುದರಿಂದ ಈ ಅವಧಿಯನ್ನು ಸೇವಾ ಅವಧಿಯೆಂದು ಸಕ್ರಮಗೊಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಂ.ಎಸ್. ಮಹಂತೇಶಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಸೇವೆಗಳು-3).

ಪಿ.ಆರ್. 1360

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಸಚಿವಾಲಯ

**ವಿಷಯ:** ಬೆಳೆ ಕಟಾಯಿಸುವ ಪ್ರಯೋಗಗಳನ್ನು ನಡೆಸುವ ಪ್ರಕ್ರಿಯೆಗೆ ಅಚ್ಚುಕಟ್ಟು ಪ್ರದೇಶ ಅಭಿವೃದ್ಧಿ ಪ್ರಾಧಿಕಾರದಿಂದ ಕೃಷಿ ಸಹಾಯಕರುಗಳನ್ನು ಮತ್ತು ಗ್ರಾಮ ಪಂಚಾಯಿತಿ ಕಾಯದರ್ಶಿಗಳನ್ನು ಒಳಗೊಂಡಿರುವಂತೆ ಅಧಿಸೂಚಿಸುವುದು.

**ಓದಲಾಗಿದೆ:** 1. ಸರ್ಕಾರದ ದಿನಾಂಕ: 20.08.03ರ ಅರೆ ಸರ್ಕಾರಿ ಪತ್ರ ಸಂಖ್ಯೆ: ಡಿಇಎಸ್/7/ಸಿಐಎಸ್/1999.

**ಪ್ರಸ್ತಾವನೆ:**

ಸಾಮಾನ್ಯಬೆಳೆ ಅಂದಾಜು ಸಮೀಕ್ಷೆ ಮತ್ತು ಬೆಳೆ ವಿಮಾ ಯೋಜನೆಯು ಬೆಳೆ ಕಟಾಯಿಸುವ ಪ್ರಯೋಗಗಳ ಅಂಶವಾಗಿರುತ್ತದೆ. ಕೃಷಿ ಮತ್ತು ವಾಟರ್‌ಶೆಡ್ ಇಲಾಖೆಯಿಂದ ಕೃಷಿ ಸಹಾಯಕರುಗಳು ಮತ್ತು ಕಂದಾಯ ಇಲಾಖೆಯಿಂದ ಗ್ರಾಮ ಲೆಕ್ಕಿಗರುಗಳು ಬೆಳೆ ಕಟಾಯಿಸುವ ಪ್ರಯೋಗಗಳಲ್ಲಿ ಪ್ರಮುಖಪಾತ್ರವಹಿಸುವರು. ಹೆಚ್ಚು ಹೆಚ್ಚು ಬೆಳೆ ಕಟಾಯಿಸುವ ಪ್ರಯೋಗಗಳು ಹಾಲಿ ಕರ್ತವ್ಯ ನಿರ್ವಹಿಸುವ ಕೆಲಸಗಾರರ ಸಂಖ್ಯೆಗೆ ಅನುಗುಣವಾಗಿರುವುದಿಲ್ಲ.

ಈ ಕುರಿತು ಹೆಚ್ಚುವರಿ ಮಾನವ ಶಕ್ತಿಯನ್ನು ಸಜ್ಜುಗೊಳಿಸುವುದರ ಕುರಿತು ದಿನಾಂಕ: 19.05.2003ರಂದು ಜರುಗಿದ ಕೃಷಿ ಅಂಕಿ ಅಂಶಗಳ ಉನ್ನತ ಮಟ್ಟದ ಸಮಿತಿಯ ಸಭೆಯಲ್ಲಿ ವಿವರವಾಗಿ ಚರ್ಚಿಸಲಾಯಿತು. ಎನ್.ಎಸ್.ಎಸ್. ಸ್ವಯಂ ಸೇವಕರು, ಸ್ವಸಹಾಯ ಗುಂಪುಗಳು, ಪಂಚಾಯಿತಿ ಕಾರ್ಯದರ್ಶಿಗಳು ಮತ್ತು ಕಾಡಾದಿಂದ ಕೃಷಿ ಸಹಾಯಕರುಗಳನ್ನು ಈ ಜವಾಬ್ದಾರಿಯುತ ಕೆಲಸವನ್ನು ನಿರ್ವಹಿಸುವ ಸಲುವಾಗಿ ಬಳಸಿಕೊಳ್ಳುವ ಬಗ್ಗೆ ಸಮಿತಿಯು ತನ್ನ ಚಿಂತನೆಯನ್ನು ಮಂಡಿಸಿತು.

ಬೆಳೆ ಕಟಾಯಿಸಿದ ಪ್ರಯೋಗಗಳು ಒಂದು ಪ್ರಧಾನವಾದ ವಿಷಯವಾಗಿದ್ದು, ಈ ದಿಶೆಯಲ್ಲಿ ಎನ್.ಎಸ್.ಎಸ್. ಸ್ವಯಂ ಸೇವಕರು, ಸ್ವಸಹಾಯ ಗುಂಪುಗಳು, ಸರ್ಕಾರಿ ಆಡಳಿತ ವ್ಯವಸ್ಥೆಯ ಹೊಣೆಗಾರಿಕೆಯ ವ್ಯಾಪ್ತಿಗೆ ಬರುವುದಿಲ್ಲ. ಹಾಗೂ ಇನ್ನಿತರ ಆಡಳಿತಾತ್ಮಕ ಕಾರಣಗಳಿಗೋಸ್ಕರ ಮತ್ತ ಸಾಮರಸ್ಯವೇರ್ಪಡದೇ ಇರುವುದು ಹೀಗಾಗಿ ಇವರುಗಳನ್ನು ಪರಿಗಣಿಸದೇ ಇರುವುದು ಯುಕ್ತವೆಂದು ಮನಗಂಡು ಅಂತಿಮವಾಗಿ ಕಂದಾಯ ಮತ್ತು ಕೃಷಿ ಇಲಾಖೆಯ ಸಮ ಸ್ಥಾನಿಕರಾದ ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳು ಮತ್ತು ಕಾಡಾದ ಕೃಷಿ ಸಹಾಯಕರುಗಳೇ ಈ ಜವಾಬ್ದಾರಿಯನ್ನು ವಹಿಸಿಕೊಳ್ಳಲು ಸೂಕ್ತ ಆಯ್ಕೆಯೆಂದು ಪರಿಗಣಿಸಲಾಯಿತು.

ಬೆಳೆ ಅಂದಾಜು ಸಮೀಕ್ಷೆ ಮತ್ತು ಬೆಳೆ ವಿಮಾ ಯೋಜನೆಯ ಹೆಚ್ಚು ಹೆಚ್ಚು ಪ್ರಾಮುಖ್ಯತೆಯನ್ನು ಹೊಂದಿರುವ ನಿಟ್ಟಿನಲ್ಲಿ ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳನ್ನು ಮತ್ತು ಕಾಡಾದ ಕೃಷಿ ಸಹಾಯಕರುಗಳನ್ನು ಬೆಳೆ ಕಟಾಯಿಸುವಂತೆ ಪ್ರಯೋಗಗಳಲ್ಲಿ ಭಾಗವಹಿಸುವ ಸಲುವಾಗಿ ಅಧಿಸೂಚಿತಗೊಳಿಸಬೇಕೆಂದು ತೀರ್ಮಾನಿಸಲಾಯಿತು. ರಾಜ್ಯ ಮತ್ತು ಜಿಲ್ಲಾ ಮಟ್ಟದಲ್ಲಿ ಆರ್ಥಿಕ ಮತ್ತು ಅಂಕಿ ಅಂಶಗಳ ನಿರ್ದೇಶನಾಲಯದವರು ಸೂಕ್ತ ತರಬೇತಿಯನ್ನು ನೀಡುವ ವ್ಯವಸ್ಥೆ ಮಾಡುವರು.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಗ್ರಾಅಪ 115 ಗ್ರಾಪಂಕಾ 2003, ಬೆಂಗಳೂರು, ದಿನಾಂಕ: 18ನೇ ಅಕ್ಟೋಬರ್, 2003**

ರಾಜ್ಯದ ಎಲ್ಲಾ ಗ್ರಾಮ ಪಂಚಾಯಿತಿ ಕಾರ್ಯದರ್ಶಿಗಳನ್ನು ಬೆಳೆ ಅಂದಾಜು ಸಮೀಕ್ಷೆ ಮತ್ತು ಬೆಳೆ ವಿಮಾ ಯೋಜನೆಯ ಬೆಳೆ ಕಟಾಯಿಸುವ ಪ್ರಯೋಗಗಳಲ್ಲಿ ಸಕ್ರಿಯವಾಗಿ ಪಾಲ್ಗೊಳ್ಳಲು ತತ್‌ಕ್ಷಣದಿಂದ ಜಾರಿಗೆ ಬರುವಂತೆ ಆದೇಶಿಸಿದೆ. ಮುಖ್ಯ ಕಾರ್ಯ ನಿರ್ವಾಹಕ ಅಧಿಕಾರಿಗಳು ಸೂಕ್ತ ನಿರ್ದೇಶನ ನೀಡಲು ಸಹ ಸೂಚಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ.ಎಸ್. ಶಾಮಸುಂದರ**

ಸರ್ಕಾರದ ಅಧೀನ ಕಾರ್ಯದರ್ಶಿ,

ಪಿ.ಆರ್. 1361 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ವಿಷಯ:** ಶ್ರೀ ಪಿ.ಹೆಚ್. ವೆಂಕಪ್ಪ ಅಂದಿನ ಕಾರ್ಯಪಾಲಕ ಇಂಜಿನಿಯರ್ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗ, ಚಿತ್ರದುರ್ಗ ಇವರ ಮೇಲಿನ ಇಲಾಖಾ ವಿಚಾರಣೆ-ವಾಗ್ದಂಡನೆ ವಿಧಿಸುವ ಬಗ್ಗೆ-ಆದೇಶ.

**ಓದಲಾಗಿದೆ:**

1. ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್, ಚಿತ್ರದುರ್ಗ ಇವರ ಪತ್ರ ಸಂಖ್ಯೆ: ಜಿಪಂಅ (7) ಇಂ:ಸಿಆರ್:99:99-2000 ದಿನಾಂಕ:05.10.01.
2. ಕಾರಣ ಕೇಳುವ ನೋಟೀಸ್ ಸಂಖ್ಯೆ:ಗ್ರಾಅಪ:27:ಇಎನ್‌ಕ್ಯೂ:99, ದಿನಾಂಕ: 27.05.02.
3. ಶ್ರೀ ಪಿ.ಹೆಚ್. ವೆಂಕಪ್ಪ, ಇವರ ದಿನಾಂಕ: 11.06.02ರ ಲಿಖಿತ ಹೇಳಿಕೆ.
4. ಆದೇಶ ಸಂಖ್ಯೆ:ಗ್ರಾಅಪ:27:ಇಎನ್‌ಕ್ಯೂ 99: ದಿನಾಂಕ: 13.09.02.
5. ವಿಚಾರಣಾಧಿಕಾರಿಗಳ ದಿನಾಂಕ: 18.02.03ರ ವಿಚಾರಣಾ ವರದಿ.
6. ಎರಡನೇ ಕಾರಣ ಕೇಳುವ ನೋಟೀಸ್ ಸಂಖ್ಯೆ:ಗ್ರಾಅಪ:27:ಇಎನ್‌ಕ್ಯೂ 99, ದಿನಾಂಕ: 24.04.03.
7. ಶ್ರೀ ಪಿ.ಹೆಚ್. ವೆಂಕಪ್ಪ ಇವರ ದಿನಾಂಕ: 08.05.03ರ ಲಿಖಿತ ಹೇಳಿಕೆ.

**ಪ್ರಸ್ತಾವನೆ:**

ಶ್ರೀ ಪಿ.ಹೆಚ್. ವೆಂಕಪ್ಪ ಇವರು ಚಿತ್ರದುರ್ಗ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿ ಕಾರ್ಯಪಾಲಕ ಇಂಜಿನಿಯರಾಗಿ ಕಾರ್ಯ ನಿರ್ವಹಿಸುತ್ತಿದ್ದ ಅವಧಿಯಲ್ಲಿ (1) ಕೊಳವೆ ಬಾವಿಗಳನ್ನು ಕೊರೆಯಿಸುವ ಬಗ್ಗೆ ಸರ್ಕಾರದಿಂದ ಹೊರಡಿಸಿರುವ ಸುತ್ತೋಲೆಯನ್ನು ಉಲ್ಲಂಘಿಸಿ 147 ಕೊಳವೆ ಬಾವಿಗಳನ್ನು ಕೊರೆಯಿಸಿರುವ, (2) ಜಿಲ್ಲಾ ಪಂಚಾಯಿತಿಯ ಆಡಳಿತಾತ್ಮಕ ಮಂಜೂರಾತಿ ಪಡೆಯದೇ 42 ಟಾರ್ಪಾಲಿನ್‌ಗಳನ್ನು ನಾನ್ ಎಸ್.ಪಿ.ಡಿ. ಸಂಸ್ಥೆಯಿಂದ 1.42 ಲಕ್ಷ ರೂ.ಗಳಿಗೆ ಖರೀದಿಸಿರುವ (3) ಜಿಲ್ಲಾ ಪಂಚಾಯಿತಿಯ ಆಡಳಿತಾತ್ಮಕ ಮಂಜೂರಾತಿ ಪಡೆಯದೇ 123 ಸಬ್‌ಮರ್ಸಿಬಲ್ ಪಂಪುಗಳನ್ನು ನಾನ್ ಎಸ್.ಪಿ.ಡಿ. ಸಂಸ್ಥೆಗಳಿಂದ ಖರೀದಿಸಿರುವರೆಂಬ, (4) ಏಕಕಾಲಕ್ಕೆ ಒಂದೇ ಸಪ್ಲೈ ಆರ್ಡರ್ ಪುಸ್ತಕ ಉಪಯೋಗಿಸಬೇಕೆಂದು ನಿಯಮವಿದ್ದರೂ ಸಹ ಅದನ್ನು ಉಲ್ಲಂಘಿಸಿ 3 ಪುಸ್ತಕಗಳನ್ನು ಏಕಕಾಲಕ್ಕೆ ಉಪಯೋಗಿಸಿ ನಿಯಮಗಳನ್ನು ಉಲ್ಲಂಘಿಸಿರುವರೆಂಬ ಬಗ್ಗೆ ಹಾಗೂ ಆರ್ಥಿಕ ನಷ್ಟ ಎಸಗಿರುವರೆಂಬ ಬಗ್ಗೆ ಹಾಗೂ (5) ಕೇಂದ್ರ ಸ್ಥಾನದಲ್ಲಿ ವಾಸವಿರಲಿಲ್ಲವೆಂಬ ಮೇಲಿನ ಐದು ಆರೋಪಗಳ ಬಗ್ಗೆ ಅವರ ವಿರುದ್ಧ ಶಿಸ್ತು ಕ್ರಮ ಜರುಗಿಸಲು ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಜಿಲ್ಲಾ ಪಂಚಾಯತ್, ಚಿತ್ರದುರ್ಗ ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ಪತ್ರದೊಂದಿಗೆ ಕರಡು ಆರೋಪ ಪಟ್ಟಿ ಹಾಗೂ ದಾಖಲೆಗಳನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಿ ಶ್ರೀ ಪಿ.ಹೆಚ್. ವೆಂಕಪ್ಪ ಅಂದಿನ ಕಾರ್ಯಪಾಲಕ ಇಂಜಿನಿಯರ್, ಇವರ ವಿರುದ್ಧ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11ರನ್ವಯ ಇಲಾಖಾ ವಿಚಾರಣೆ ಹೂಡಿ ಮೇಲೆ ಕ್ರ.ಸಂ. (2)ರಲ್ಲಿ ಓದಲಾದ ದಿನಾಂಕ: 27.5.02ರ ಕಾರಣ ಕೇಳುವ ನೋಟೀಸಿನೊಂದಿಗೆ ಆರೋಪ ಪಟ್ಟಿ ಜಾರಿ ಮಾಡಿತ್ತು. ಆಪಾದಿತ ಅಧಿಕಾರಿಯು ತಮ್ಮ ಮೇಲಿನ ಆರೋಪಗಳಿಗೆ ಸಂಬಂಧಿಸಿದಂತೆ ಮೇಲೆ ಓದಲಾದ ಕ್ರಮ ಸಂಖ್ಯೆ: (3)ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಆರೋಪಗಳನ್ನು ನಿರಾಕರಿಸಿದ್ದರು. ಸದರಿಯವರ ಲಿಖಿತ ಹೇಳಿಕೆಗಳನ್ನು ಸರ್ಕಾರವು ಪರಿಶೀಲಿಸಿ ಅವುಗಳು ಸಮರ್ಪಕವಾಗಿಲ್ಲವೆಂದು ಕಂಡುಬಂದಿದ್ದರಿಂದ ಅವರ ಮೇಲಿನ ಆಪಾದನೆಗಳ ಬಗ್ಗೆ ಸತ್ಯಾಂಶವನ್ನರಿಯಲು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಲು ನಿರ್ಧರಿಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (4)ರ ಆದೇಶದಲ್ಲಿ ನಿವೃತ್ತ ನ್ಯಾಯಾಧೀಶರಾದ ಶ್ರೀ ಎನ್.ಎಸ್. ಸಂಗೊಳ್ಳಿ, ಬೆಂಗಳೂರು ಇವರನ್ನು ವಿಚಾರಣಾಧಿಕಾರಿಯನ್ನಾಗಿ ಹಾಗೂ ಉಪ ಕಾರ್ಯದರ್ಶಿ (ಅ) ಜಿಲ್ಲಾ ಪಂಚಾಯತ್,

ಚಿತ್ರದುರ್ಗ ಇವರನ್ನು ಮಂಡನಾಧಿಕಾರಿಯನ್ನಾಗಿ ನೇಮಿಸಿತ್ತು. ಅದರಂತೆ ವಿಚಾರಣಾಧಿಕಾರಿಗಳು ಪ್ರಕರಣದಲ್ಲಿ ವಿವರವಾದ ವಿಚಾರಣೆ ನಡೆಸಿ ಮೇಲೆ ಓದಲಾದ ಕ್ರಮ ಸಂಖ್ಯೆ: (5)ರಲ್ಲಿ ವಿಚಾರಣಾ ವರದಿಯನ್ನು ಸರ್ಕಾರಕ್ಕೆ ಸಲ್ಲಿಸಿದ್ದರು.

ವಿಚಾರಣಾಧಿಕಾರಿಗಳು ಪ್ರಕರಣದಲ್ಲಿನ ಆಪಾದಿತರಾದ ಶ್ರೀ ಪಿ.ಹೆಚ್. ವೆಂಕಪ್ಪ ಕಾರ್ಯಪಾಲಕ ಇಂಜಿನಿಯರ್, ಇವರ ಮೇಲಿನ 1 ರಿಂದ 3ರವರೆಗಿನ ಆರೋಪಗಳು ರುಜುವಾತಾಗಿರುವುದಾಗಿ ಹಾಗೂ ಆರೋಪ 4 ಮತ್ತು 5 ರುಜುವಾತಾಗಿರುವುದಿಲ್ಲವೆಂದು ಸರ್ಕಾರಕ್ಕೆ ವರದಿ ಮಾಡಿದ್ದರು. ಅದರಂತೆ ಸರ್ಕಾರವು ಆಪಾದಿತರಿಗೆ ಮೇಲೆ ಓದಲಾದ ಕ್ರಮ ಸಂಖ್ಯೆ: (6)ರಲ್ಲಿ ಎರಡನೇ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿತ್ತು. ಸದರಿ ಎರಡನೇ ಕಾರಣ ಕೇಳುವ ನೋಟೀಸಿಗೆ ಆಪಾದಿತ ಅಧಿಕಾರಿಯು ಮೇಲೆ ಓದಲಾದ ಕ್ರಮ ಸಂಖ್ಯೆ: (7)ರಂತೆ ತಮ್ಮ ಲಿಖಿತ ಹೇಳಿಕೆಗಳನ್ನು ಸಲ್ಲಿಸಿ ತಮ್ಮ ಮೇಲಿನ ಎಲ್ಲಾ ಆರೋಪಗಳನ್ನು ನಿರಾಕರಿಸಿ ತಮ್ಮನ್ನು ಆರೋಪಗಳಿಂದ ದೋಷಮುಕ್ತಗೊಳಿಸುವಂತೆ ಸರ್ಕಾರವನ್ನು ಕೋರಿದ್ದರು. ಆಪಾದಿತರು ಎರಡನೇ ಕಾರಣ ಕೇಳುವ ನೋಟೀಸಿಗೆ ನೀಡಿರುವ ಲಿಖಿತ ಹೇಳಿಕೆಗಳನ್ನು ಪರಿಶೀಲಿಸಿದಾಗ ಅವರಿಂದ ಸರ್ಕಾರಕ್ಕೆ ಯಾವುದೇ ಆರ್ಥಿಕ ನಷ್ಟ ಉಂಟಾಗಿಲ್ಲವೆಂದು ಕಂಡು ಬರುತ್ತದೆ ಹಾಗೂ ಅವರು ಸುತ್ತೋಲೆ ಸೂಚನೆಗಳನ್ನು ಉಲ್ಲಂಘಿಸಿದ್ದರೂ ಖರೀದಿ ಸಮಿತಿಯ ಅನುಮೋದನೆಯೊಂದಿಗೆ ಖರೀದಿಗಳನ್ನು ಮಾಡಿರುವುದರಿಂದ ಆಡಳಿತಾತ್ಮಕ ಅನುಮೋದನೆ ಪಡೆಯದೇ ಖರೀದಿಸಿರುವುದು ಕಾರ್ಯವಿಧಾನದ ಲೋಪವೆಂದು ಸರ್ಕಾರವು ನಿರ್ಣಯಿಸಿ ಸದರಿ ಕಾರ್ಯವಿಧಾನದ ಲೋಪಕ್ಕಾಗಿ ಅವರಿಗೆ ಲಿಖಿತ ವಾಗ್ದಂಡನೆಯನ್ನು ವಿಧಿಸಲು ನಿರ್ಣಯಿಸಿದೆ. ಆದ್ದರಿಂದ ಈ ಕೆಳಕಂಡಂತೆ ಆದೇಶಿಸಿದೆ.

**ಆದೇಶ ಸಂಖ್ಯೆ: ಗ್ರಾಅಪ:27:ಇಎನ್‌ಕ್ಯೂ:99, ಬೆಂಗಳೂರು, ದಿನಾಂಕ: 21ನೇ ಅಕ್ಟೋಬರ್, 2003**

ಪ್ರಸ್ತಾವನೆಯಲ್ಲಿ ವಿವರಿಸಲಾದ ಅಂಶಗಳ ಹಿನ್ನೆಲೆಯಲ್ಲಿ ಸರ್ಕಾರವು ಚಿತ್ರದುರ್ಗ ಜಿಲ್ಲಾ ಪಂಚಾಯತ್ ಇಂಜಿನಿಯರಿಂಗ್ ವಿಭಾಗದಲ್ಲಿನ ಅಕ್ರಮಗಳಿಗೆ ಸಂಬಂಧಿಸಿದಂತೆ ಶ್ರೀ ಪಿ.ಹೆಚ್. ವೆಂಕಪ್ಪ, ಅಂದಿನ ಕಾರ್ಯಪಾಲಕ ಇಂಜಿನಿಯರ್ ಇವರ ಮೇಲೆ ಮಾಡಲಾಗಿದ್ದ ಆರೋಪಗಳಿಗೆ ಸಂಬಂಧಿಸಿದಂತೆ ಕರ್ನಾಟಕ ಸರ್ಕಾರಿ ಸೇವಾ ನಿಯಮಾವಳಿಗಳ (ವನಿಮೇ) ನಿಯಮ 8(ii)ರನ್ವಯ ಅವರು ಎಸಗಿರುವ ಕಾರ್ಯವಿಧಾನದ ಲೋಪಕ್ಕಾಗಿ ಅವರಿಗೆ ವಾಗ್ದಂಡನೆಯನ್ನು ವಿಧಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎ. ಹೊನ್ನಪ್ಪ ನಾಯಕ್**

ಸರ್ಕಾರದ ಅಧೀನ ಕಾರ್ಯದರ್ಶಿ (ಸೇವೆಗಳು-ಎ),

ಪಿ.ಆರ್. 1362 ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ.

**ಆರ್ಥಿಕ ಸಚಿವಾಲಯ**

**ವಿಷಯ:** 2003-2004ನೇ ಸಾಲಿಗಾಗಿ ಮಿತವ್ಯಯ ಕ್ರಮಗಳು

**ಓದಲಾಗಿದೆ:** ಸರ್ಕಾರದ ಆದೇಶ ಸಂಖ್ಯೆ ಆಇ 3 ಬಿಇಎಂ 2001 ದಿನಾಂಕ:17-10-2001.

**ಪ್ರಸ್ತಾವನೆ:**

ಮೇಲೆ ಉಲ್ಲೇಖಿಸಲಾದ ಆದೇಶದಲ್ಲಿ ಯೋಜನೆಗೆ ಹೆಚ್ಚು ಹಣವನ್ನು ಒದಗಿಸುವ ಸಲುವಾಗಿ ಸಂಪನ್ಮೂಲಗಳನ್ನು ಕ್ರೋಢೀಕರಿಸಲು ಮತ್ತು ಯೋಜನೇತರ ವೆಚ್ಚದಲ್ಲಿ ಮಿತವ್ಯಯವನ್ನು ಸಾಧಿಸಲು ಒಂದು ಸಮಗ್ರ ಮಿತವ್ಯಯ ಆದೇಶವನ್ನು ಹೊರಡಿಸಲಾಯಿತು.

ಕರ್ನಾಟಕದಲ್ಲಿ ಸತತ ಮೂರು ವರ್ಷಗಳ ಕಾಲ ಸಂಭವಿಸಿದ ಬರಗಾಲವು ಹಿಂದೆಂದೂ ಇದ್ದಿಲ್ಲದಂತಹ ತೀವ್ರ ತರವಾದ ಯಾತನೆ ಮತ್ತು ಕಷ್ಟವನ್ನು ರೈತರಿಗೆ ಉಂಟು ಮಾಡಿದೆ. ರಾಜ್ಯ ಸರ್ಕಾರವು ಉದ್ಯೋಗ ಒದಗಿಸುವ, ಕುಡಿಯುವ ನೀರು ಮತ್ತು ದನಕರುಗಳಿಗೆ ಮೇವಿನ ಪೂರೈಕೆ ಮಾಡುವ ಬೃಹತ್ ಪರಿಹಾರ ಕ್ರಮಗಳನ್ನು ಕೈಗೊಂಡಿದೆ. ಆದಾಗ್ಯೂ ಕೃಷಿ ಅರ್ಥವ್ಯವಸ್ಥೆಯನ್ನು ಪುನರ್‌ಜೀವನಗೊಳಿಸಲು ಮತ್ತು ಬರಗಾಲ ಪೀಡಿತ ರೈತರು ಮತ್ತು ಸಂಬಂಧಿಸಿದ ಸಂಸ್ಥೆಗಳು ತಮ್ಮ ಚಟುವಟಿಕೆಗಳನ್ನು ಪುನಃ ಪ್ರಾರಂಭಿಸಲು ತುರ್ತು ಪರಿಹಾರ ಕಾರ್ಯಕ್ರಮದ ಅಗತ್ಯವಿರುತ್ತದೆ.

ರಾಜ್ಯದಲ್ಲಿರುವ ಬರಗಾಲ ಪರಿಸ್ಥಿತಿಯನ್ನು ಮನಗಂಡು ರಾಜ್ಯ ಸರ್ಕಾರವು ರೈತರಿಗೆ ಪರಿಹಾರಗಳನ್ನು ಒದಗಿಸಲು ಉದ್ದೇಶಿಸಿದೆ. ಈ ಪರಿಹಾರದ ಅಂದಾಜನ್ನು ರೂ. 880.00 ಕೋಟಿಗಳೆಂದು ಅಂದಾಜು ಮಾಡಲಾಗಿದ್ದು, ಈ ಉದ್ದೇಶಕ್ಕೆ ಪ್ರಸಕ್ತ ಸಾಲಿನ ಆರ್ಥಿಕ ವರ್ಷದ ಆಯವ್ಯಯದಲ್ಲಿ ಅವಕಾಶವನ್ನು ಮಾಡಿರುವುದಿಲ್ಲ. ಆದಕಾರಣ ಸರ್ಕಾರದ ವೆಚ್ಚವನ್ನು ಕಡಿತಗೊಳಿಸಲು ಕಟ್ಟುನಿಟ್ಟಿನ ಆರ್ಥಿಕ ಮಿತವ್ಯಯ ಕ್ರಮಗಳನ್ನು ಈ ಕೂಡಲೇ ಜಾರಿಗೊಳಿಸುವ ಅವಶ್ಯಕತೆ ಇರುತ್ತದೆ. ಆದ್ದರಿಂದ ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಆಇ 2 ಬಿಇಎಂ 2003, ಬೆಂಗಳೂರು, ದಿನಾಂಕ:29ನೇ ಸೆಪ್ಟೆಂಬರ್, 2003**

ದಿನಾಂಕ 17-10-2001ರ ಸರ್ಕಾರದ ಆದೇಶದಲ್ಲಿ ನಿಗಧಿಪಡಿಸಲಾದ ಆರ್ಥಿಕ ಮಿತವ್ಯಯ ಕ್ರಮಗಳೊಂದಿಗೆ, ಈ ಕೆಳಕಂಡ ಮಿತವ್ಯಯ ಕ್ರಮಗಳು ತತ್‌ಕ್ಷಣದಿಂದ ಜಾರಿಗೆ ಬರುತ್ತವೆ:

1. ಆಯವ್ಯಯದಲ್ಲಿ ಅವಕಾಶವನ್ನು ಮಾಡಿದ್ದರೂ ಸಹ ಯಾವುದೇ ಇಲಾಖೆಯು ಸಾಮಗ್ರಿ ಮತ್ತು ದಾಸ್ತಾನು ಸಂಗ್ರಹ/ ಪೀಠೋಪಕರಣಗಳು ಮತ್ತು ಜೋಡಣೆಗಳು (**Fixtures**) ಇವುಗಳನ್ನು ಕೊಳ್ಳುವಂತಿಲ್ಲ. ಆದಾಗ್ಯೂ ವಿದೇಶಿ ಅನುದಾನಿತ ಯೋಜನೆಗಳು ಮತ್ತು ಆರೋಗ್ಯ ಸೇವೆಗಳಿಗೆ ಸಂಬಂಧಿಸಿದ ಪ್ರಸ್ತಾವನೆಗಳನ್ನು ಪೂರ್ಣ ಸಮರ್ಥನೆಯೊಂದಿಗೆ ಆರ್ಥಿಕ ಇಲಾಖೆಗೆ ಕಳುಹಿಸಿ ಕೊಡತಕ್ಕದ್ದು.
2. 2003-2004ನೇ ಆರ್ಥಿಕ ವರ್ಷದಲ್ಲಿ ಆಧುನೀಕರಣಕ್ಕಾಗಿ ವಿವರಣಾ ಶೀರ್ಷಿಕೆ-125-ಆಧುನೀಕರಣ ಇದರಡಿ ಆಯವ್ಯಯ ಅವಕಾಶವನ್ನು ಮಾಡಿದ್ದರೂ ಸಹ ಇಲಾಖೆಗಳು ಆಧುನೀಕರಣಕ್ಕಾಗಿ ಯಾವುದೇ ವೆಚ್ಚವನ್ನು ಮಾಡುವಂತಿಲ್ಲ. ಆರ್ಥಿಕ ವರ್ಷದ ಇನ್ನುಳಿದ ಭಾಗದಲ್ಲಿ ವಿವರಣಾ ಶೀರ್ಷಿಕೆ "125-ಆಧುನೀಕರಣ"ವನ್ನು ಸ್ಥಗಿತಗೊಳಿಸುವಂತೆ ಖಜಾನೆ ನಿರ್ದೇಶಕರು, ಜಿಲ್ಲಾ ಖಜಾನೆಗಳಿಗೆ ಸ್ಪಷ್ಟ ನಿರ್ದೇಶನ ನೀಡಬೇಕು. ವಿಶೇಷ ಸಂದರ್ಭಗಳಲ್ಲಿ ಆರ್ಥಿಕ ಇಲಾಖೆಯ ಅನುಮೋದನೆಯನ್ನು ಪಡೆಯತಕ್ಕದ್ದು.

3. ವಿಧಾನ ಮಂಡಲ ಮತ್ತು ಮಂತ್ರಿ ಮಂಡಲವು ಒಳಗೊಂಡಂತೆ ಇಲಾಖೆಗಳ ಎಲ್ಲಾ ಕಾರ್ಯದರ್ಶಿಗಳ ಪ್ರಯಾಣ ವೆಚ್ಚವನ್ನು ಶೇಕಡಾ 20ಕ್ಕೆ ಕಡಿತಗೊಳಿಸುವುದು. ಆದರೆ, ಕಾನೂನು ಮತ್ತು ವ್ಯವಸ್ಥೆ ಜಾರಿಗೊಳಿಸುವ ಮತ್ತು ಬರಗಾಲ ಮೇಲ್ವಿಚಾರಣೆಗೆ ಸಂಬಂಧಿಸಿದಂತೆ ಮಾಡಲಾಗುವ ಪ್ರಯಾಣಕ್ಕೆ ಈ ಕಡಿತ ಅನ್ವಯಿಸುವುದಿಲ್ಲ. ಇಲಾಖೆಗಳು ಈ ನಿರ್ಬಂಧವನ್ನು ಜಾರಿಗೊಳಿಸಲು ಅಧಿಕೃತ ಪ್ರವಾಸಗಳನ್ನು ಕಡಿಮೆ ಮಾಡಲು ಕ್ರಮ ತೆಗೆದುಕೊಳ್ಳುವುದು.
4. ರಾಜ್ಯದ ಹೊರಗೆ ವಿಮಾನಯಾನವನ್ನು ಸಂಪೂರ್ಣವಾಗಿ ನಿಷೇದಿಸಲಾಗಿದೆ. ವಿಶೇಷ ಸಂದರ್ಭಗಳಲ್ಲಿ ಇಲಾಖಾ ಮುಖ್ಯಸ್ಥರು ಮತ್ತು ಸರ್ಕಾರದ ಕಾರ್ಯದರ್ಶಿಗಳು, ಮುಖ್ಯ ಕಾರ್ಯದರ್ಶಿಗಳ ಪೂರ್ವಾನುಮತಿ ಪಡೆದ ನಂತರವೇ ವಿಮಾನಯಾನವನ್ನು ಕೈಗೊಳ್ಳಬಹುದಾಗಿದೆ. ಮಂತ್ರಿ ಮಂಡಲದ ಸದಸ್ಯರುಗಳು ಮುಖ್ಯಮಂತ್ರಿಯವರ ಪೂರ್ವಾನುಮತಿಯನ್ನು ಪಡೆದ ನಂತರವೇ ರಾಜ್ಯದ ಹೊರಗೆ ವಿಮಾನಯಾನವನ್ನು ಮಾಡಬಹುದಾಗಿದೆ.
5. ಮಂತ್ರಿ ಮಂಡಲದ ಸದಸ್ಯರು ಮತ್ತು ಶಾಸಕಾಂಗ ಒಳಗೊಂಡಂತೆ ಹೊಸ ವಾಹನಗಳ ಖರೀದಿಯನ್ನು ಪೂರ್ಣವಾಗಿ ನಿಷೇದಿಸಲಾಗಿದೆ. ಪೆಟ್ರೋಲ್, ತೈಲ ಮತ್ತು ಲೂಬ್ರಿಕೆಂಟ್ಸ್ ಹಾಗೂ ವಾಹನಗಳ ನಿರ್ವಹಣೆ ಮತ್ತು ದುರಸ್ತಿ ಇವುಗಳ ಮೇಲಣ ವೆಚ್ಚವನ್ನು 2003–2004ರ ಸಾಲಿನ ಆಯವ್ಯಯ ಅವಕಾಶದ ಶೇಕಡ 20ಕ್ಕೆ ಕಡಿತಗೊಳಿಸಲಾಗಿದೆ.
6. ಮಂತ್ರಿ ಮಂಡಲ ಮತ್ತು ಶಾಸಕಾಂಗ ಇವರ ಕಛೇರಿಗಳನ್ನೂ ಒಳಗೊಂಡಂತೆ ಎಲ್ಲಾ ಕಛೇರಿಗಳಲ್ಲಿ ದೂರವಾಣಿ ವೆಚ್ಚ, ಲೇಖನ ಸಾಮಾಗ್ರಿ ವೆಚ್ಚಗಳನ್ನು ಶೇಕಡಾ 20ಕ್ಕೆ ಕಡಿತಗೊಳಿಸಲಾಗಿದೆ.
7. ನೇರ ನೇಮಕಾತಿ ಮೂಲಕ ಯೋಜನೆ ಮತ್ತು ಯೋಜನೇತರ ಅಡಿಯಲ್ಲಿ ಹೊಸ ಹುದ್ದೆಗಳ ಸೃಜನೆ ಮತ್ತು ಭರ್ತಿ ಮಾಡುವುದನ್ನು ಪೂರ್ಣವಾಗಿ ನಿಷೇದಿಸಲಾಗಿದೆ. ಆದರೆ, ವಿದೇಶಿ ಅನುದಾನಿತ ಯೋಜನೆಗಳಿಗೆ ಈ ನಿಷೇಧ ಅನ್ವಯಿಸುವುದಿಲ್ಲ. ಆದರೆ, ವಿದೇಶಿ ಅನುದಾನಿತ ಯೋಜನೆಗಳಲ್ಲಿ ಹುದ್ದೆಗಳ ಸೃಜನೆ ಮತ್ತು ಭರ್ತಿ ಮಾಡುವ ಪ್ರಸ್ತಾವನೆಗಳಿಗೆ ಆರ್ಥಿಕ ಇಲಾಖೆಯ ಪೂರ್ವ ಸಹಮತಿಯನ್ನು ಪಡೆಯತಕ್ಕದ್ದು.

ಪುನರ್ವಿನಿಯೋಗದ ಮೂಲಕ ವೇತನದಲ್ಲಿನ ಉಳಿತಾಯದಿಂದ ವೇತನೇತರ ವೆಚ್ಚವನ್ನು ಭರಿಸಲು ಅವಕಾಶವಿರುವುದಿಲ್ಲ. ಮುಖ್ಯ ನಿಯಂತ್ರಣಾಧಿಕಾರಿಗಳು, ಆಯವ್ಯಯ ಅಂದಾಜು ತಯಾರಿಕಾ ಅಧಿಕಾರಿಗಳು ಮತ್ತು ಇಲಾಖಾ ಮುಖ್ಯಸ್ಥರುಗಳು ಈ ಮಿತವ್ಯಯ ಕ್ರಮಗಳನ್ನು ಕಟ್ಟುನಿಟ್ಟಾಗಿ ಜಾರಿಗೊಳಿಸಲು ಜವಾಬ್ಧಾರರಾಗಿರುತ್ತಾರೆ. ನಿಗಧಿ ಪಡಿಸಲಾದ ಕಡಿತಗಳಿಗಿಂತ ಹೆಚ್ಚುವರಿ ವೆಚ್ಚ ಮಾಡಿದ್ದಲ್ಲಿ ಅದನ್ನು ತೀವ್ರವಾಗಿ ಪರಿಗಣಿಸಲಾಗುವುದು.

ಎಲ್ಲಾ ಖಜಾನೆಗಳಲ್ಲಿ ಆಯವ್ಯಯ ನಿಯಂತ್ರಣವನ್ನು ಜಾರಿಗೊಳಿಸಿರುವುದರಿಂದ, ಜಿಲ್ಲಾ / ಉಪ ಖಜಾನೆಗಳು ಖಜಾನೆಗಳಲ್ಲಿ ಸಲ್ಲಿಸಲಾದ ಎಲ್ಲಾ ಬಿಲ್ಲುಗಳನ್ನು ಸೂಕ್ಷ್ಮವಾಗಿ ಪರಿಶೀಲಿಸತಕ್ಕದ್ದು ಹಾಗೂ ಮಿತವ್ಯಯ ಕ್ರಮಗಳಲ್ಲಿ ಪ್ರಸ್ತಾಪಿಸಲಾದ ಸ್ಥಗಿತ / ಕಡಿತಗಳನ್ನು ಒಳಗೊಂಡಂತಹ ಕಟ್ಟುನಿಟ್ಟಾದ ಆಯವ್ಯಯ ನಿಯಂತ್ರಣವನ್ನು ಜಾರಿಗೊಳಿಸತಕ್ಕದ್ದು.

ಈ ಎಲ್ಲಾ ಆರ್ಥಿಕ ಮಿತವ್ಯಯ ಕ್ರಮಗಳು ಅವಶ್ಯವಿರುವ ಬದಲಾವಣೆಗಳೊಂದಿಗೆ ಜಿಲ್ಲಾ ಪಂಚಾಯತ್‌ಗಳು, ಅನುದಾನಿತ ಸಂಸ್ಥೆಗಳು, ನಗರ ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ವಲಯ ಉದ್ದಿಮೆಗಳು, ರಾಜ್ಯ ಸ್ವಾಯತ್ತ ಸಂಸ್ಥೆಗಳು ಮತ್ತು ನಿಗಮಗಳಿಗೆ ಅನ್ವಯವಾಗುತ್ತದೆ.

ಪ್ರತಿ ಇಲಾಖೆಯು ಅನುಷ್ಠಾನಗೊಳಿಸಿದ ಮಿತವ್ಯಯ ಕ್ರಮಗಳ ಪರಿಣಾಮದ ಬಗ್ಗೆ ಆರ್ಥಿಕ ಇಲಾಖೆಯು ಆರ್ಥಿಕ ವರ್ಷದ ಅಂತಿಮ ಭಾಗದಲ್ಲಿ ಸುದೀರ್ಘವಾಗಿ ವಿಮರ್ಶಿಸಬೇಕು. ಯಾವುದೇ ಇಲಾಖೆಯು ಈ ಕ್ರಮಗಳನ್ನು ಪಾಲಿಸಿಲ್ಲವೆಂದು ಕಂಡುಬಂದಲ್ಲಿ, ಹೆಚ್ಚುವರಿ ಮತ್ತು ವಿಸ್ತರಿಸಲಾದ ಮಿತವ್ಯಯ ಕ್ರಮಗಳನ್ನು 2004–2005ನೇ ಸಾಲಿಗೂ ವಿಧಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ಕೆ. ದಾಸ್**

ಅಪರ ಮುಖ್ಯ ಕಾರ್ಯದರ್ಶಿ ಮತು
ಸರ್ಕಾರದ ಪ್ರಧಾನ ಕಾರ್ಯದರ್ಶಿ,
ಆರ್ಥಿಕ ಇಲಾಖೆ.

## FINANCE SECRETARIAT

**Subject :** Austerity Measures for 2003-2004.

**Read :** Government Order No. : FD 3 BEM 2001, dated 17-10-2001.

**Preamble:**

A comprehensive Economy Order was issued in the GO cited under reference in order to conserve resources and exercise economy in Non-Plan Expenditure to make available more funds for Plan.

Widespread drought in Karnataka for the third successive year has caused severe and unprecedented distress and hardship to farmers. State Government has undertaken large scale relief measures for providing employment, supply of drinking water and also fodder for cattle. However, urgent relief measures are also necessary to revive agricultural economy and enabling the drought affected farmers and the related institutions to restart their operations.

